

## ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಕರೀಗೌಡ ಬೀಚನಹಳ್ಳಿ ಕಥೆಗಳಲ್ಲಿ ಗ್ರಾಮ್ಯಬದುಕು


ನಿಬಂಧಕಾರರು

**ಕೋಮಲ ಸಿ.**

ಕನ್ನಡ ಎಂ.ಫಿಲ್. ವಿದ್ಯಾರ್ಥಿನಿ (ಕ.ವಿ.ವಿ. ಹಂಪಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎಚ್.ಪಿ. ಗೀತಾ**

ಕನ್ನಡ ಸಹ ಪ್ರಾಧ್ಯಾಪಕು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕುವೆಂಪುನಗರ, ಮೈಸೂರು






ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧

923



ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಕರೀಗೌಡ ಬೀಚನಹಳ್ಳಿ ಕಥೆಗಳಲ್ಲಿ ಗ್ರಾಮ್ಯ ಬದುಕು

ನಿಬಂಧಕಾರರು

**ಕೋಮಲ ಸಿ.**

ಕನ್ನಡ ಎಂ.ಫಿಲ್. ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ)

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಕನ್ನಡ ಗ್ರಂಥಾಲಯ.
ಕನ್ನಡ ವಿಶ್ವವಿದ್ಯಾಲಯ. ಹಂಪಿ.

ಮಾರ್ಗದರ್ಶಕರು

**ಡಾ. ಎಚ್.ಪಿ. ಗೀತಾ**

ಕನ್ನಡ ಸಹ ಪ್ರಾಧ್ಯಾಪಕರು

ಸರ್ಕಾರಿ ಪ್ರಥಮದರ್ಜೆ ಕಾಲೇಜು

ಕುವೆಂಪುನಗರ, ಮೈಸೂರು

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧

# ದೃಢೀಕರಣ ಪತ್ರ

೨೦೧೦-೧೧ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS-00484**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿನಿಯಾದ ಕೋಮಲ ಸಿ. ಅವರು ನನ್ನ ಮಾರ್ಗದರ್ಶನದಲ್ಲಿ **"ಕರೀಗೌಡ ಬೀಚನಹಳ್ಳಿ ಕಥೆಗಳಲ್ಲಿ ಗ್ರಾಮ್ಯ ಬದುಕು"** ಎಂಬ ವಿಷಯವನ್ನು ಆಯ್ಕೆಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ.

ಈ ಸಂಶೋಧನಾ ನಿಬಂಧವನ್ನು ಶ್ರೀಯುತರು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ ಅಥವಾ ಡಿಪ್ಲೊಮೋಗಳಿಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಮೈಸೂರು**
೩೧-೦೫-೨೦೧೧

(ಡಾ. ಎಚ್.ಪಿ. ಗೀತಾ)
**ಮಾರ್ಗದರ್ಶಕರು**
ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕುವೆಂಪುನಗರ, ಮೈಸೂರು

# ಅಭ್ಯರ್ಥಿಯ ಘೋಷಣಾ ಪತ್ರ

**"ಕರೀಗೌಡ ಬೀಚನಹಳ್ಳಿ ಕಥೆಗಳಲ್ಲಿ ಗ್ರಾಮ್ಯ ಬದುಕು"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ **KVTMKS-00484** ವಿದ್ಯಾರ್ಥಿನಿಯಾದ ನಾನು ೨೦೧೦-೧೧ನೇ ಸಾಲಿನ ಪರೀಕ್ಷೆಗಾಗಿ ಡಾ. ಎಚ್.ಪಿ.ಗೀತಾ ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮದರ್ಜೆ ಕಾಲೇಜು, ಕುವೆಂಪುನಗರ, ಮೈಸೂರು ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಕೋಮಲ.ಸಿ.

**ಮೈಸೂರು**
ದಿನಾಂಕ: ೩೧-೦೫-೨೦೧೧

**(ಕೋಮಲ .ಸಿ)**
೨೦೧೦-೧೧ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

[illegible] ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕರೀಗೌಡ ಬೀಚನಹಳ್ಳಿ ಕಥೆಗಳಲ್ಲಿ ಗ್ರಾಮ್ಯಬದುಕು

## ಪರಿವಿಡಿ



*****

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕೃಷಿ ಸಂಸ್ಕೃತಿಯಿಂದ ಬಂದ ಕರೀಗೌಡ ಬೀಚನಹಳ್ಳಿಯವರಿಗೆ ಗ್ರಾಮಗಳ ಬಗ್ಗೆ ಅಪಾರ ಕಾಳಜಿ, ಆಸಕ್ತಿ. ಸದಾ ಕಾಲ ಹಳ್ಳಿ ಜನರ ಜೊತೆ ಒಡನಾಟವನ್ನು ಇಟ್ಟುಕೊಂಡ ಕರೀಗೌಡರು ಪ್ರಗತಿವಾದಿ ಸುಧಾರಣಾವಾದಿಯಾಗಿ ಕಂಡುಬರುತ್ತಾರೆ. ಅವರ ಬದುಕಿನ ಕ್ಷಣಕ್ಷಣದಲ್ಲಿ ಹಳ್ಳಿಯ ಉದ್ಧಾರ, ಅದರ ಏಳಿಗೆಗಾಗಿ ಶ್ರಮಿಸುತ್ತಿದ್ದಾರೆ. ನಾವು ಅವರ ಕತೆಗಳನ್ನು ಗಮನಿಸಿದಾಗ ಒಬ್ಬ ಸುಧಾರಣಾವಾದಿಯಾಗಿ, ಪ್ರಗತಿವಾದಿಯಾಗಿ ಕಂಡುಬರುವುದನ್ನು ಕಾಣುತ್ತೇವೆ. ಇವರ ಸಮಕಾಲೀನ ಲೇಖಕರ ಕತೆಗಳನ್ನು ಗಮನಿಸಿದಾಗ, ಕರೀಗೌಡರ ಕತೆಗಳಲ್ಲಿ ಕಂಡುಬರುವಂತಹ ಮೂಲ ಗ್ರಾಮ್ಯ ಸೊಗಡು ಅಷ್ಟಾಗಿ ಕಂಡುಬರುವುದಿಲ್ಲ. ಕರೀಗೌಡರಿಗೆ ಗ್ರಾಮಗಳ ಮೇಲಿನ ವ್ಯಾಮೋಹವಿರುವುದು ಅವರ ಕತೆಗಳಲ್ಲಿ ವ್ಯಕ್ತವಾಗಿದೆ.

ಪ್ರಸ್ತುತ ಯುಗದಲ್ಲಿ ಬಹುರಾಷ್ಟ್ರೀಯ ಕಂಪನಿ ಮತ್ತು ಬಂಡವಾಳಶಾಹಿಗಳು ಗ್ರಾಮೀಣ ಭಾಗದ ರೈತರ ಫಲವತ್ತಾದ ಭೂಮಿಯನ್ನು ಉದ್ಯೋಗ ಮತ್ತು ಹಣದ ಆಮಿಷವನ್ನು ತೋರಿ ಭೂಕಬಳಿಕೆ ಮಾಡುತ್ತಿದ್ದಾರೆ. ಇದಕ್ಕೆ ಪಶ್ಚಿಮ ಬಂಗಾಳದ ನಂದಿಗ್ರಾಮ ನಿದರ್ಶನವಾಗಿದೆ. ಪ್ರಸ್ತುತ ಮಾಹಿತಿ ತಂತ್ರಜ್ಞಾನ ಯುಗಕ್ಕೆ ಜನರು ಮಾರುಹೋಗುತ್ತಿರುವ ಇಂತಹ ಸಂದರ್ಭದಲ್ಲಿ ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿ ಗ್ರಾಮ್ಯರು ನಗರ ಸಂಸ್ಕೃತಿಗೆ ಮಾರುಹೋಗದೆ ಗ್ರಾಮ್ಯಬದುಕಿನ ಸಂಸ್ಕೃತಿ- ಯನ್ನು ಉಳಿಸಿ ಬೆಳೆಸುವ ಪ್ರಯತ್ನಗಳನ್ನು ಅವರ ಸಮಗ್ರ ಕತೆಗಳ ಮೂಲಕ ಅಭಿವ್ಯಕ್ತಿಯಾಗಿರುವುದನ್ನು ಕಾಣಬಹುದು.

ಕೆಲವು ಗ್ರಾಮೀಣರು ಮಾತ್ರ ತಮ್ಮ ತವರಾದ ಹಳ್ಳಿಯನ್ನು ಮರೆತಿಲ್ಲ. ಸಂಪಾದನೆಗಾಗಿ ನಗರವನ್ನು ಆಶ್ರಯಿಸಿ ಹಳ್ಳಿಯಲ್ಲಿನ ತಮ್ಮ ಅಸ್ತಿತ್ವದ ಬೇರನ್ನು ಭದ್ರಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ವಿನಾಕಾರಣ ತಮ್ಮ ಭೂಮಿಯನ್ನು ಕಳೆದುಕೊಳ್ಳಲು ಇಚ್ಛಿಸುವುದಿಲ್ಲ. ಜೊತೆಗೆ ಹಳ್ಳಿಯಲ್ಲಿರುವ ತನ್ನ ತಂದೆತಾಯಿಯರ ಆರೈಕೆ ಕೂಡ ಅವರ ಕರ್ತವ್ಯವಾಗಿರುತ್ತದೆ.

ದೇಶ ಮುಂದುವರಿಯಲು ಹಳ್ಳಿಗಳೇ ಹಿನ್ನೆಲೆ. ಪಟ್ಟಣದ ಮನೆಮಂದಿಯೆಲ್ಲಾ ನಕ್ಕುನಲಿಯಲು ನಮ್ಮ ರೈತರೇ ಕಾರಣ. ನಮ್ಮ ರೈತರಿಗೆ ತನ್ನ ತಾಯಿ ಮೇಲೆ ಇರುವುದಷ್ಟೇ ಮಮಕಾರ ತನ್ನ ನೆಲ, ಜಲ ಗ್ರಾಮಗಳ ಬಗ್ಗೆ ಇದೆ. ಯಾವುದೇ ಕಾರಣಕ್ಕೂ ತನ್ನ ಭೂತಾಯಿಗೆ ಅನ್ಯಾಯವಾಗುವುದಕ್ಕೆ ಬಿಡುವುದಿಲ್ಲ. ಸೌಮ್ಯ ಮೂರ್ತಿಯಂತಹ ಈ ಭೂಮಿಯಲ್ಲಿ ಜನಿಸಿದ ಪ್ರತಿಯೊಬ್ಬರೂ ಕೂಡ ಧನ್ಯರು. ಈ

ಮಣ್ಣಿನ ಮಹತ್ವಕ್ಕೆ ಬೆಲೆ ಕಟ್ಟಲು ಅಸಾಧ್ಯ. ಹಳ್ಳಿಗಾಡಿನ ಜನರು ತಾನು ಉಂಡು ಪರರಿಗೂ ನೀಡುವಂತಹ ಗುಣವುಳ್ಳವರು. ನಮ್ಮ ನಾಡು ತನ್ನದೇ ಆದ ಒಂದು ಅಮೂಲ್ಯವಾದ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿವೆ. ಆ ಸಂಸ್ಕೃತಿಯು ಕನ್ನಡ ನಾಡಿಗೆ ಕಿರೀಟವಿಟ್ಟಂತೆ. ನಮ್ಮ ಸಂಸ್ಕೃತಿ ತನ್ನದೇ ಆದ ಹಿರಿಮೆಯನ್ನು ಉಳಿಸಿಕೊಂಡಿದೆ. ಈ ನಾಡಿನ ಸಂಸ್ಕೃತಿ ಪ್ರಭಾವ ಅನ್ಯರನ್ನು ಆಕರ್ಷಿಸುವಂತಹದು.

ಕನ್ನಡನಾಡಿನ ನಿಜವಾದ ನೆಲೆಯಿರುವುದು ಗ್ರಾಮಗಳಲ್ಲಿ. ಅದರಲ್ಲೂ ಪಾವಿತ್ರ್ಯತೆ ಉಳಿಸಿಕೊಂಡು, ಮಮಕಾರದ ಮಡಿಲಾಗಿ ಬಾಂಧವ್ಯದ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವುದು ಗ್ರಾಮಗಳೇ. ನಮ್ಮ ಜನ ಓದಿ, ಬುದ್ಧಿವಂತರಾಗಿ ಕೆಲಸದ ನಿಮಿತ್ತ ಪಟ್ಟಣಕ್ಕೆ ಹೋಗುತ್ತಾರೆ. ಪಟ್ಟಣದಲ್ಲಿ ವಾಸವಾಗಿದ್ದರೂ ಕೂಡ ಹಳ್ಳಿಯ ಅಸ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ. ಸಂಪಾದಿಸಲು ಪಟ್ಟಣ, ಬದುಕಲು ಹಳ್ಳಿ. ಹಳ್ಳಿಯಲ್ಲಿ ಕಂಡುಬರುವ ಶಾಂತಿ, ನೆಮ್ಮದಿಯ ಜೀವನ ಪಟ್ಟಣದಲ್ಲಿ ಇಲ್ಲ. ಆದರೆ ಇಂದಿಗೂ ತಂದೆತಾಯಿಗಳು ಮಾತ್ರ ಹಳ್ಳಿಯನ್ನು ಬಿಟ್ಟುಬರುವುದಿಲ್ಲ.

ಹಳ್ಳಿಯ ಜನರು ಶ್ರಮಜೀವಿಗಳು. ಅವರು ಕಷ್ಟಪಟ್ಟರು, ದ್ರೋಹ, ಮೋಸ ದರೋಡೆ ಮಾಡುವ ಕೆಲಸಕ್ಕೆ ಹೋಗುವುದಿಲ್ಲ. ತಮಗೆ ಎಷ್ಟೇ ಕಷ್ಟ ಬಂದರೂ ದುಡಿಯುವುದನ್ನು ಬಿಡುವುದಿಲ್ಲ. ಅತಿಯಾದ ಆಸೆಯು ಕೂಡ ಅವರಲ್ಲಿ ಕಂಡು-ಬರುವುದಿಲ್ಲ. ನಿಯತ್ತಿನ ಜನರು ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಮುಸ್ಲಿಂ ಜನರು ಎಷ್ಟೇ ಬಡತನವಿದ್ದರೂ ಕೂಡ ಅವರ ಆಚಾರ-ವಿಚಾರಗಳಿಗೆ ಬಡತನವಿರುವುದಿಲ್ಲ. ಈ ರೀತಿಯ ಜೀವನವನ್ನು ನಾವು ಪಟ್ಟಣದಲ್ಲಿ ಕಾಣಲು ಸಾಧ್ಯವಿಲ್ಲ. ಅವರ ಜೀವನ ವಿಧಾನ ಆದರ್ಶವನ್ನು ನಾವು ನೋಡಿ ಕಲಿಯಬೇಕು.

ನಮ್ಮ ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುವುದು ಎಂದರೆ ಅಳಿಯ ಅತ್ತೆಯ ಮನೆಯಲ್ಲೇ ಇರುವುದು. ಇದರಿಂದ ಅವರಿಗೆ ಸಿಗುವ ಮರ್ಯಾದೆ ಎಷ್ಟರಮಟ್ಟಿಗೆ ಇರುತ್ತದೆ ಹಾಗೂ ಅವರ ಅಧಿಕಾರವೇನು ಎಂಬುದನ್ನು ಅರಿಯಬೇಕು. ಜೊತೆಗೆ ಹಳ್ಳಿಯ ಪಟೇಲರು ನಡೆಸುವ ದರ್ಬಾರು, ಅವನು ಜೀತದಾಳುಗಳನ್ನು ನೋಡಿಕೊಳ್ಳುವ ರೀತಿ ಇವೆಲ್ಲವೂ ಅವರ ಅಮಾನವೀಯ ಗುಣಗಳನ್ನು ಎತ್ತಿ ತೋರುತ್ತದೆ. ಈ ಕಾರಣದಿಂದಲೇ ಇಂದಿಗೂ ನಮ್ಮ ಗ್ರಾಮಗಳು ಹಿಂದುಳಿದಿವೆ. ಅವರು ಮೂಢನಂಬಿಕೆ ಬಗ್ಗೆ ಜಾಗೃತಗೊಳ್ಳಬೇಕು. ಅದನ್ನು ಪ್ರತಿಭಟಿಸುವ ಮನಗಳು ಹುಟ್ಟಬೇಕು. ಇದನ್ನು ವಿರೋಧಿಸುವಂತೆ ಕರೀಗೌಡರ ಕತೆಗಳು ಸುಧಾರಕರಾಗಿ ಕೆಲಸಮಾಡಿವೆ. ಜನರಲ್ಲಿ ಇರುವ ಅಜ್ಞಾನ ಹೊರಹಾಕುವ ಅಥವಾ ನಾಶ ಮಾಡುವ ಪ್ರಯತ್ನ ಮಾಡಿವೆ. ಗ್ರಾಮದಲ್ಲಿ ಹೆಚ್ಚು ಜನರ ಮದ್ಯವ್ಯಸನಗಳಿಗೆ ತುತ್ತಾಗಿ ತಮ್ಮ ಕುಟುಂಬವನ್ನು ಬೀದಿಗೆ ತರುತ್ತಿರುವುದನ್ನು ನಿಯಂತ್ರಿಸುವುದು. ಇಲ್ಲಿ

ಕರೀಗೌಡ ಬೀಚನಹಳ್ಳಿಯವರ ಕತೆಗಳು ಅನೇಕ ಸುಧಾರಣೆಗಳನ್ನು ತರಲು ಪ್ರಯತ್ನಿಸಿರುವುದನ್ನು ಕಾಣಬಹುದು. ಇಲ್ಲಿ ಜನರು ಹೆಚ್ಚಾಗಿ ದುಷ್ಪಚಟದಿಂದ ಮನೆಮಠದ ಕಡೆ ಗಮನಹರಿಸದೆ ಇರುವುದನ್ನು ತಡೆಯುವುದು. ತಮ್ಮ ಕುಟುಂಬದ ಪ್ರತಿಯೊಂದು ಆಗುಹೋಗುಗಳಿಗೆ ಪೂಜಾರಯ್ಯನ ಮೊರೆಹೋಗುವುದನ್ನು ಸಾಧ್ಯವಾದಷ್ಟು ಮಟ್ಟಿಗೆ ತಡೆಯಬೇಕಾದುದು ಪ್ರಜ್ಞಾವಂತರ ಕರ್ತವ್ಯವಾಗಿದೆ. ನಾಗರಿಕತೆ ಎಷ್ಟೇ ಬೆಳೆದರೂ ಅವರಲ್ಲಿ ಯಾವ ರೀತಿ ಬದಲಾವಣೆಯನ್ನು ಮಾಡಿಕೊಳ್ಳದಿರುವುದನ್ನು ಕಾಣಬಹುದು.

ಜನರಲ್ಲಿ ಹುಟ್ಟಿನ ಜೊತೆಗೆ ಮೇಲು ಕೀಳು ಎಂಬ ಭಾವನೆ ಮೂಡಿದೆ. ಅದು ಎಷ್ಟರ ಮಟ್ಟಿಗೆ ಬೆಳೆದಿದೆ ಎಂದರೆ ಅದು ಅವರ ಚರ್ಮದೊಂದಿಗೆ ಅಂಟಿಕೊಂಡು ಬಂದಿದೆ ಎಂದು ಹೇಳಬಹುದು. ಬಲ್ಲಿದರೆಂದರೆ (ಶ್ರೀಮಂತ) ಸ್ವಚ್ಛವಾಗಿರುವವರು ಬಡವರೆಂದರೆ ಕೊಳಕಾಗಿರುವವರು ಎಂಬ ಭಾವನೆ ಅವರವರ ಮನದಲ್ಲಿ ಬೆಳೆದುಬಂದಿದೆ. ಇದರ ಜೊತೆಗೆ ಹೊಲಗೇರಿಯ ಅಥವಾ ಬಡಕುಟುಂಬ ವರ್ಗದ ಮಕ್ಕಳನ್ನು ಅವರು ಮಾಡಿದ ಸಾಲಕ್ಕಾಗಿ ಜೀತವಿರಿಸುವ ಅನಿಷ್ಟಪದ್ಧತಿ ಎದ್ದು ಕಾಣುತ್ತದೆ. ಇದನ್ನು ಬುಡಸಮೇತವಾಗಿ ಕಿತ್ತುಹಾಕುವ ಕೆಲಸ ನಮ್ಮೆಲ್ಲರದು ಎಂಬುವುದನ್ನು ಕರೀಗೌಡರ ಕತೆಗಳು ತಿಳಿಸುತ್ತವೆ.

ಹಿಂದು ಮುಂದು ಯೋಚಿಸದೆ ಹೆಣ್ಣು ಮಕ್ಕಳು ಮದುವೆಯಾಗಿ ಗಂಡನ ಮನೆಗೆ ಹೋದರೆ ಸಾಕು ಎಂಬ ಭಾವನೆ. ಅವರು ಮದುವೆಯಾಗಿ ವರ್ಷ ತುಂಬುವುದರ ಒಳಗೆ ಪುನಃ ತಂದೆ ಮನೆ ಸೇರುವುದು ಸಹಜವಾಗಿ ಕಂಡುಬರುತ್ತದೆ. ಇದರ ಬಗ್ಗೆ ಹೆಂಗಳೆಯ ಮನದಲ್ಲಿ ಗುಪ್ತವಾಗಿದ್ದ ಸಮಸ್ಯೆಯನ್ನು ಅರ್ಥಮಾಡಿಕೊಂಡು ಅವರ ಸಮಸ್ಯೆಗಳನ್ನು ಪರಿಹರಿಸುವುದು. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂಬಂತೆ ಆ ಹೆಣ್ಣಿನಲ್ಲಿ ನೈತಿಕ ಬಲವನ್ನು ತುಂಬಲು ಪ್ರಯತ್ನಿಸಬೇಕು. ಈ ಕರ್ತವ್ಯ ತಂದೆ-ತಾಯಿಗಳಾದಗಿರುತ್ತದೆ.

ಗ್ರಾಮಗಳಲ್ಲಿ ಇಂದಿಗೂ ಉಳಿಸಿಕೊಂಡು ಬಂದಿರುವ ಒಂದು ವ್ಯವಸ್ಥೆ ಎಂದರೆ ಸಾಂಪ್ರದಾಯಿಕ ಆಚರಣೆಗಳು. ಈ ಆಚರಣೆಯಲ್ಲಿ ಬಡವ-ಬಲ್ಲಿದ ಎನ್ನದೆ ತಮ್ಮ ಯೋಗ್ಯತೆಗೆ ತಕ್ಕಂತೆ ಬಹಳ ಸಂಭ್ರಮದಿಂದ ಆಚರಣೆ ಮಾಡುತ್ತಾರೆ. ಇದು ಅಲ್ಲಿನ ಜನರ ಭಾವೈಕ್ಯತೆಯ ಸಂಕೇತವಾಗಿ ಬೆಳೆದುಕೊಂಡು, ತನ್ನತನವನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಮುಗ್ಧ ಜನರ ಮನಸ್ಸಿನಲ್ಲಿ ಊರ ಹಬ್ಬಗಳ ಮಹತ್ವದ ಬಗ್ಗೆ ತಿಳುವಳಿಕೆಯನ್ನು ನೀಡಬೇಕು. ಇಂತಹ ಆಚರಣೆಗಳಲ್ಲಿ ಯಾವುದೇ ಸಂಘರ್ಷಕ್ಕೂ ಅನುವುಮಾಡಿಕೊಡಬಾರದು. ಊರಹಬ್ಬಗಳ ಮುಖ್ಯ ಉದ್ದೇಶವೇ

ಎಲ್ಲರೂ ಒಟ್ಟಾಗಿ ಒಂದೆಡೆ ಸೇರಿ ತಮ್ಮ ಸಂತೋಷವನ್ನು ವಿನಿಮಯ-ಮಾಡಿಕೊಳ್ಳಬೇಕೆಂಬುದು.

ಮಕ್ಕಳು ದೇವರ ಸಮಾನ, ಅವರಿಗೆ ಮೋಸ ವಂಚನೆ ದ್ರೋಹದ ಬಗ್ಗೆ ಪರಿವಿರುವುದಿಲ್ಲ. ಅವರದು ನಿರ್ಮಲವಾದ ಮನಸ್ಸು. ಆ ಮನಸ್ಸು ಬಿಳಿಯ ಕಾಗದದ ರೀತಿ ಸ್ವಚ್ಛವಾಗಿರುತ್ತದೆ. ನಾವು ಏನು ಬರೆಯುತ್ತೇವೋ, ಅದೇ ಅಲ್ಲಿ ಅಚ್ಚಾಗುತ್ತದೆ. ಇಂತಹ ಚಿಕ್ಕಪುಟ್ಟ ಮಕ್ಕಳಲ್ಲಿ ಜಾತಿಭೇದ ಎಂಬ ತಾರತಮ್ಯವನ್ನು ತರಬಾರದು. ಯಾವುದೇ ಹೆಣ್ಣು ಮಗುವನ್ನು ಜೀತಕ್ಕೆ ಇರಿಸಬಾರದು. 'ಬಾಲ ಕಾರ್ಮಿಕ' ಪದ್ಧತಿಯ ಬಗ್ಗೆ ಜನರಲ್ಲಿ ತಿಳುವಳಿಕೆ ಮೂಡುವಂತೆ ಮಾಡಬೇಕು. ಮಾಡುವ ಕೆಲಸದಲ್ಲಿ ಜಾತೀಯತೆಯ ಭಾವನೆ ತರಬಾರದು ಎಂಬುದಕ್ಕೆ 'ಉಗುಳು' ಕತೆಯು ಗೌಡ ಮತ್ತು ಪೂಜಾರಯ್ಯ ನಡುವೆ ನಡೆಯುವ ಆ ಪೂಜಾ ವ್ಯವಸ್ಥೆಯಿಂದ ಅದನ್ನು ಸುಧಾರಿಸುವ ಪ್ರಯತ್ನವನ್ನು ಮಾಡಿವೆ.

ಗ್ರಾಮಗಳ ಹೊಲಗೇರಿಯಲ್ಲಿ ಜನ್ಮವಿತ್ತ ಜನರು ತಂದೆತಾಯಿ ಮಕ್ಕಳು ಎಂಬುವುದನ್ನು ಕಾಣದೆ ಒಟ್ಟಿಗೆ ಕುಳಿತು ಕುಡಿಯುವ ವ್ಯವಸ್ಥೆ. ಈ ವ್ಯವಸ್ಥೆ ಒಂದು ನೋಟಕ್ಕೆ ಒಳ್ಳೆಯದಾಗಿ ಕಂಡುಬಂದರೆ ಮತ್ತೊಂದು ನೋಟಕ್ಕೆ ಕೆಟ್ಟದಾಗಿ ಕಾಣುತ್ತದೆ. ಈ ಒಂದು ವ್ಯವಸ್ಥೆಯನ್ನು ಬೆಳೆಸಿಕೊಂಡು ಹೋದರೆ, ಹೊಲಗೇರಿಯಲ್ಲಿ ಹೆಂಡ ಮಾಯವಾಗುವುದರಲ್ಲಿ ಅನುಮಾನವಿಲ್ಲ. ಕೆಳವರ್ಗದ ಜನ ತಾವು ಮಾಡುವ ಸಂಪಾದನೆಯನ್ನೆಲ್ಲಾ ಸಂಪೂರ್ಣವಾಗಿ ಇದಕ್ಕೆ ಹಾಕುತ್ತಾರೆ. ಇದರಿಂದ ವಂಚಿತರಾದರೆ ಮಾತ್ರ ಹೊಲಗೇರಿಗಳು ಉದ್ಧಾರವಾಗಲು ಸಾಧ್ಯ.

ಹೊಲಗೇರಿ ಮಂದಿಗೆ ಜಾಗೃತ ಮನೋಭಾವ ಮೂಡಿಸುವುದು ಅವಶ್ಯಕ. ಇವರ ಕತೆಗಳು ಸಮಾಜದಲ್ಲಿ ಎಲ್ಲರೂ ಒಂದೇ ಸಮಾನ. ಇಲ್ಲಿ ಮೇಲು-ಕೀಳು ಎಂಬ ಭಾವನೆಯನ್ನು ಕಿತ್ತೊಗೆಯುವ ಪ್ರಯತ್ನ ನಡೆಸಿವೆ. ನಮ್ಮ ಹಳ್ಳಿಯ ಬಡಕುಟುಂಬ ಇಂದಿಗೂ ಕೂಡ ಅನ್ನ ತಿನ್ನುವುದು ಹಬ್ಬ ಹರಿದಿನಗಳಲ್ಲಿ ಮಾತ್ರ. ಬಿಡಿ ದಿನಗಳಲ್ಲಿ ಖಾಲಿರೊಟ್ಟಿ ತಿಂದುಕೊಂಡು ಜೀವಿಸುತ್ತಿರುವುದನ್ನು ಕಾಣಬಹುದು.

ನಮ್ಮ ಗ್ರಾಮಾಂತರದ ತಾಯಂದಿರು ತಮ್ಮ ಮಕ್ಕಳನ್ನು ನೋಡಿಕೊಳ್ಳಲು ಹಿರಿಯ ಹೆಣ್ಣು ಮಗಳನ್ನು ಶಾಲೆ ಬಿಡಿಸುವುದು ಕಂಡುಬರುತ್ತದೆ. ನಮ್ಮ ಗ್ರಾಮ್ಯದ ತಾಯಂದಿರು ಒಂದು ಮಗುವನ್ನು ನೋಡಿಕೊಳ್ಳುವುದಕ್ಕಾಗಿ ಇನ್ನೊಂದು ಮಗುವಿನ ವಿದ್ಯಾಭ್ಯಾಸವನ್ನು ನಿಲ್ಲಿಸುವುದು ಮಹಾ ಅಪರಾಧ. ಸಾಧ್ಯವಾದಷ್ಟು ಇದನ್ನು ತಡೆಯಬೇಕು. ಇಲ್ಲಿ ಕರೀಗೌಡರ ಕತೆಗಳು ಪ್ರಗತಿವಾದಿ ಸುಧಾರಣೆಗಳನ್ನು ಮಾಡಿರುವುದು ಕಂಡುಬರುತ್ತದೆ. ಅನಕ್ಷರಸ್ಥರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು

ಮಾಡಿದ್ದಾರೆ. ಇಂದಿಗೂ ಹಳ್ಳಿಯ ಜನರು ಮೌಢ್ಯತೆಯಿಂದ ಹೊರಬಂದಿಲ್ಲ. ಇನ್ನೂ ಎಷ್ಟೋ ಮಂದಿಗೆ ಅವರು ಹುಟ್ಟಿದ ಹಳ್ಳಿ, ಸೇರಿದ ಹಳ್ಳಿಯನ್ನು ಬಿಟ್ಟರೆ ಬೇರೆ ನಗರವನ್ನೇ ಕಾಣದ ಜನರು ಗ್ರಾಮದಲ್ಲಿದ್ದಾರೆ. ಅವರಲ್ಲಿ ಸಮಕಾಲೀನ ಪ್ರಪಂಚದ ಬಗ್ಗೆ ತಿಳುವಳಿಕೆ ನೀಡಬೇಕು.

ಹಳ್ಳಿಯಲ್ಲಿರುವ ತಂದೆತಾಯಿಗಳು ತಾವು ಗಟ್ಟಿಯಾಗಿರುವಾಗಲೇ ನಮ್ಮ ಮಕ್ಕಳಿಗೆ ಮದುವೆ ಮಾಡಿ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳಬೇಕೆಂಬ ಹಂಬಲ. ಇದರಿಂದಾಗಿ ಮಕ್ಕಳು ಪ್ರೌಢರಾಗಿಲ್ಲದಿದ್ದರೂ ಮದುವೆ ಮಾಡುವುದು ಕಂಡುಬರುತ್ತದೆ. ಕೆಲವರಂತೂ ತಮ್ಮ ಒಡಹುಟ್ಟಿದ ಸಂಬಂಧವನ್ನು ಉಳಿಸಿಕೊಳ್ಳಲು ಬಾಲ್ಯದಲ್ಲಿಯೇ ಇವನಿಗೆ ಅವಳು, ಅವಳಿಗೆ-ಇವನು ಎಂದು ಹೇಳಿ ಮದುವೆ ಮಾಡುವುದನ್ನು ಕಾಣಬಹುದು. ಇದಕ್ಕೆ ಸಾಕ್ಷಿಯೆಂಬಂತೆ ಇತ್ತೀಚೆಗೆ ನಡೆದ ಬಾಲ್ಯವಿವಾಹಗಳು. ಈ ರೀತಿಯ ವ್ಯವಸ್ಥೆಯಿಂದ ಅನೇಕ ಮಕ್ಕಳು ಬಚಾವ್ ಆದರು. ಆದರೆ ಸರ್ಕಾರದ ಕಣ್ಣಿಗೆ ಕಾಣದೆ ಬೇಕಾದಷ್ಟು ಬಾಲ್ಯವಿವಾಹಗಳು ನಡೆಯುತ್ತಲೇ ಇವೆ. ಇದನ್ನು ಬುದ್ಧಿಜೀವಿಗಳು ತಡೆಯುವ ಪ್ರಯತ್ನ ಮಾಡಬೇಕು.

ನಮ್ಮ ಗ್ರಾಮದ ಮಂದಿ ಅನ್ಯರ ಮೇಲೆ ಬಹಳ ಬೇಗ ವಿಶ್ವಾಸವಿಡುತ್ತಾರೆ. "ಬೆಳ್ಳಗಿರುವುದೆಲ್ಲಾ ಹಾಲು ಎಂಬಂತೆ" ನಂಬುವ ಮಂದಿ. ಇದನ್ನು ದುರುಪಯೋಗ-ಪಡಿಸಿಕೊಳ್ಳುವವರು ಬೇಕಾದಷ್ಟು ಜನರು ಇರುತ್ತಾರೆ. ಮುಗ್ಧತೆ, ಅಸಹಾಯಕತೆ ಎಂಬುವುದು ಒಂದು ಎಲ್ಲೆಯವರೆಗೆ ಇರಬೇಕೆ ವಿನಃ, ಅದು ಅತಿಯಾಗಿ ಮುಂದುವರಿಯಬಾರದು. ಈ ವಿಷಯವಾಗಿ ನಮ್ಮ ಜನ ಬಹಳ ಎಚ್ಚರಿಕೆಯಿಂದ ಇರಬೇಕು. ಅಬಲೆಯರಾದ ಹೆಣ್ಣು ಮಗಳು ಕುಡುಕನ ಕೈಯಿಡಿದು ನನ್ನ ಹಣೆಬರಹ ಎಂದು ಭಾವಿಸಿ, ಅವನಲ್ಲಿರುವ ಒಳ್ಳೆಯ ಗುಣಗಳನ್ನು ಪ್ರಶಂಸೆ ಜೊತೆಗೆ ತನಗೆ ಎಷ್ಟೇ ಕಷ್ಟ ಬಂದರೂ ಅವನೊಂದಿಗೆ ಜೀವನ ನಡೆಸುತ್ತಾಳೆ.

'ಶಿಕ್ಷಣ' ಪಡೆಯುವುದು ಮಕ್ಕಳ ಮೂಲಭೂತ ಹಕ್ಕು. ಆದ್ದರಿಂದ ಯಾವುದೇ ಕಾರಣಕ್ಕೂ ಶಿಕ್ಷಣದಿಂದ ವಂಚಿತರಾಗಬಾರದು. ಗೌಡರು ಸರ್ಕಾರದೊಂದಿಗೆ ಪೈಪೋಟಿ ನಡೆಸಿ ಪ್ರಾಥಮಿಕ ಶಾಲೆ ಆರಂಭಿಸುವುದನ್ನು ನೋಡಿದಾಗ ಹಳ್ಳಿಯ ಮುಗ್ಧರನ್ನು ಪ್ರಗತಿಯತ್ತ ಕೊಂಡೊಯ್ಯುವ ವ್ಯವಸ್ಥೆಯನ್ನು ಈ ಕತೆಗಳಲ್ಲಿ ಕಾಣಬಹುದು. ಪ್ರತಿಯೊಬ್ಬರಿಗೆ ಶಿಕ್ಷಣದ ಮಹತ್ವದ ಬಗ್ಗೆ ಅರಿವು ಮೂಡಿಸಿ, ಅವರನ್ನು ಜಾಗೃತಗೊಳಿಸುವುದು. ವಿದ್ಯೆ ಕಲಿಯಲು ಹೆಣ್ಣು ಗಂಡು ಎಂಬ ಬೇಧಭಾವವನ್ನು ಮಾಡದೆ ಸರ್ವರಿಗೂ ವಿದ್ಯೆ ಕಲಿಯುವ ಅವಕಾಶವಿದೆ ಎಂಬುದನ್ನು ತಿಳಿಯಪಡಿಸುತ್ತವೆ. ವಿನಾಕಾರಣ ಶಾಲೆಗೆ ಹೋಗುವ ಮಗುವನ್ನು ಶಾಲೆ ಬಿಡಿಸಬಾರದು. ಈ ಆಲೋಚನೆ ತಂದೆತಾಯಿಗಳಿಗೆ ಮುಖ್ಯವಾಗಿ ಇರಬೇಕು.

ಹೆಣ್ಣಾಗಲೀ ಗಂಡಾಗಲೀ ಓದುವುದರಲ್ಲಿ ಆಸಕ್ತಿ ಇರುವ ಮಕ್ಕಳನ್ನು ಓದಿಸುವುದು ಅವರ ಜವಾಬ್ದಾರಿ.

ಶಿಕ್ಷಣಕ್ಕಾಗಿಯೇ ಸರ್ಕಾರ ಕೋಟ್ಯಾಂತರ ರೂಪಾಯಿ ಖರ್ಚು ಮಾಡುತ್ತಿದೆ. ಅದರ ಸದುಪಯೋಗಪಡಿಸಿಕೊಳ್ಳುವುದು ನಮ್ಮೆಲ್ಲರ ಕರ್ತವ್ಯವಾಗಿದೆ. ಹಳ್ಳಿಗಳಲ್ಲಿ ತಮ್ಮ ಸಂಸಾರದ ಸಮಸ್ಯೆ ದೊಡ್ಡದೆಂದು ಭಾವಿಸಿ ಮಕ್ಕಳನ್ನು ಶಾಲೆ ಬಿಡಿಸಿ ತಮ್ಮ ಕೆಲಸಕ್ಕಾಗಿ ಬಳಸಿಕೊಳ್ಳುವುದನ್ನು ಬಿಡಬೇಕು.

ನಗರ ಮಕ್ಕಳಿಗಿಂತ ಹೆಚ್ಚಾಗಿ ಓದುವ ತವಕ ಗ್ರಾಮದ ಮಕ್ಕಳಲ್ಲಿ ಕಂಡುಬರುತ್ತದೆ. ಆ ಮಕ್ಕಳಲ್ಲಿ ಇರುವ ಮಹಾತ್ವಕಾಂಕ್ಷೆಯನ್ನು ಪೂರೈಸಬೇಕಾದ ಕರ್ತವ್ಯ ನಮ್ಮೆಲ್ಲರದಾಗಿದೆ. ಅವರ ಉನ್ನತ ಶಿಕ್ಷಣಕ್ಕೆ ಅನುಕೂಲವಾಗುವಂತ ವ್ಯವಸ್ಥೆ ಮಾಡಬೇಕು. ಈಗ ಇರುವ ವಿದ್ಯಾಪೀಠಗಳಲ್ಲಿ ಆಗುತ್ತಿರುವ ಅನ್ಯಾಯಗಳನ್ನು ಸರಿಪಡಿಸುವ ಕಡೆ ಸಂಬಂಧಪಟ್ಟವರು ಗಮನಹರಿಸಬೇಕು. ಸರ್ಕಾರ ಹಳ್ಳಿಗಾಡಿನ ಮಕ್ಕಳ ಓದಿಗಾಗಿ ನೀಡುತ್ತಿರುವ ಸವಲತ್ತುಗಳನ್ನು ಸದುಪಯೋಗಪಡಿಸಿಕೊಳ್ಳಬೇಕು ಎಂಬುವುದನ್ನು ಇವರ ಕತೆಗಳು ತಿಳಿಸುತ್ತವೆ.

ಪ್ರಸ್ತುತ ಅಧ್ಯಯನದ ಸೌಕರ್ಯಕ್ಕಾಗಿ ವಸ್ತು ವಿಷಯಗಳ ಆಧಾರದ ಮೇಲೆ ಕರೀಗೌಡ ಬೀಚನಹಳ್ಳಿಯವರ ಕತೆಗಳನ್ನು ಐದು ಅಧ್ಯಾಯವಾಗಿ ಮಾಡಿಕೊಂಡಿದ್ದೇನೆ.

೧) ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೨) ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿ ಕಂಡುಬರುವ ಸಾಮಾಜಿಕ ಪ್ರಜ್ಞೆ

೩) ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿ ಕಂಡುಬರುವ ಶೈಕ್ಷಣಿಕ ಪ್ರಜ್ಞೆ

೪) ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿ ಗ್ರಾಮ್ಯಬದುಕು

೫) ಉಪಸಂಹಾರ

# ಅಧ್ಯಾಯ - ೨

## ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿ ಕಂಡುಬರುವ ಸಾಮಾಜಿಕಪ್ರಜ್ಞೆ

ಡಾ. ಕರೀಗೌಡರು ಕಳೆದ ಮೂವತ್ತು ವರ್ಷಗಳಿಂದ ಸಣ್ಣಕತೆ, ವಿಮರ್ಶೆ, ನಾಟಕ, ಅನುವಾದ, ಸಂಪಾದನೆ ಮುಂತಾದ ಸಾಹಿತ್ಯಿಕ ರಚನೆಗಳಿಂದಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಸೃಜನಶೀಲ ಪ್ರತಿಭೆಯನ್ನು ಅನಾವರಣಗೊಳಿಸಿದ್ದಾರೆ. ಹಳ್ಳಿಯ ಮಡಿಲಲ್ಲಿ ಬೆಳೆದ ಕರೀಗೌಡರು ಆ ಮಣ್ಣಿನ ಸ್ಪರ್ಶ ಸುಖವನ್ನು ಅನುಭವಿಸಿದವರು. ಹಳ್ಳಿಗಾಡಿನ ಸವಿಯನ್ನು ಒಳಗೊಂಡಂತಹ ಅನೇಕ ಕತೆಗಳನ್ನು ಬರೆದಿದ್ದಾರೆ. ಈ ಕತೆಗಳಲ್ಲಿ ಕಂಡುಬರುವ ಜಾತಿಪದ್ಧತಿ, ಮೂಢನಂಬಿಕೆ, ಕೂಡಿಕೆ, ಕುಡಿತ, ವೇಶ್ಯಾವಾಟಿಕೆ, ಅಂತರಜಾತಿ ವಿವಾಹ, ಆಶ್ರಮ ವ್ಯವಸ್ಥೆ, ನೊಂದ ಜನರಿಗೆ ಸಾಂತ್ವನ ಹೇಳಿ ಅವರ ಜೀವನಕ್ಕೆ ಸರಿಯಾದ ಮಾರ್ಗವನ್ನು ತೋರಿಸಿಕೊಟ್ಟ ಉದಾರಿಗಳ ತಾಣ ಗ್ರಾಮಗಳಾಗಿವೆ. ಈ ಗ್ರಾಮಗಳು ಅನೇಕ ಸಾಮಾಜಿಕ ಪಿಡುಗುಗಳಿಂದ ಕೂಡಿದ್ದು ಅದನ್ನು ಹೋಗಲಾಡಿಸುವ ಯುವಕರು ಈ ಹಳ್ಳಿಗಳಲ್ಲಿ ಹುಟ್ಟಬೇಕು. ಪ್ರತಿಯೊಬ್ಬರು ಹಳ್ಳಿಯನ್ನು ಸಮೃದ್ಧಗೊಳಿಸಿ ಅವರ ಜೀವನಮಟ್ಟವನ್ನು ಸುಧಾರಿಸಬೇಕು. ಹಳೆಯ ತಲೆಮಾರುಗಳಿಂದ ಬಂದ ಕಂದಾಚಾರವನ್ನು ಬಿಟ್ಟು, ಯಾವುದೇ ವಿಚಾರದಲ್ಲೂ ಜಾಗೃತ ಮನೋಭಾವನೆಯನ್ನು ಹುಟ್ಟಿಸಿಕೊಳ್ಳಬೇಕು. ಯಾವುದೇ ವ್ಯಕ್ತಿಯು ಹುಟ್ಟಿನಿಂದ ಕೆಟ್ಟವರು ಆಗಿರುವುದಿಲ್ಲ. ಸಮಯ ಸಂದರ್ಭಗಳು ಆ ವ್ಯಕ್ತಿಯನ್ನು ಕೆಟ್ಟವನನ್ನಾಗಿ ಮಾಡುತ್ತವೆ. ಅಂತಹ ವ್ಯಕ್ತಿಯನ್ನು ಮಾನವೀಯ ಗುಣವುಳ್ಳ ವ್ಯಕ್ತಿಯು ಸಹಾಯಕ್ಕೆ ಹೋಗಿ ಅವರಲ್ಲಿ ಸೋದರಭಾವವುಂಟು ಮಾಡಿದ ಘಟನೆಗಳು ಕಂಡುಬರುತ್ತವೆ. ಹಳ್ಳಿಗಳಲ್ಲಿ ಆಗುವ ಅನ್ಯಾಯವನ್ನು ತಡೆಗಟ್ಟುವ ಕೆಲಸಗಳು ಸದಾ ಕಾಲ ನಡೆಯಬೇಕು. ಹಳ್ಳಿಗಾಡಿನ ಜನರಲ್ಲಿ ಕಂಡುಬರುವ ಸಾಮಾಜಿಕ ಚಟುವಟಿಕೆಗಳ ಬಗ್ಗೆ ಗಮನಹರಿಸಬೇಕು. ಈ ರೀತಿಯಾಗಿ ನಾವುಗಳು ಎಚ್ಚೆತ್ತುಗೊಂಡರೆ ಗ್ರಾಮ ಮತ್ತು ಅಲ್ಲಿಯ ಜನರು ನಗರವಾಸಿಗಳಿಗೆ ಯಾವುದರಲ್ಲೂ ಕಮ್ಮಿಯಿಲ್ಲವೆಂದು ಹೇಳಬಹುದು.

ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿ ಮೇಲು-ಕೀಳು ಎಂಬ ಭಾವನೆ ಕಂಡುಬರುತ್ತದೆ. ಈ ಮೇಲು-ಕೀಳು ಎಂಬ ಭಾವನೆಯಿಂದಾಗಿಯೇ ಬಡವ ಬಲ್ಲಿದ ಹುಟ್ಟಿಕೊಳ್ಳುವುದು. ಇದರಿಂದಾಗಿ ವ್ಯಕ್ತಿ ವ್ಯಕ್ತಿಯ ನಡುವೆ ತಾರತಮ್ಯ ಉಂಟಾಗುತ್ತದೆ. ಇಲ್ಲ ಯಾವುದೇ ವ್ಯಕ್ತಿ ಮುಂದುವರಿಯುವುದನ್ನು ನೋಡಿ ಸಹಿಸಿಕೊಳ್ಳದೇ ಹೊಟ್ಟೆಕಿಚ್ಚಿನಿಂದ ಸಾಯುವ ಜನರೇ ಹೆಚ್ಚಾಗಿ ಕಂಡುಬರುತ್ತಾರೆ. ಈ ಭಾವನೆಗಳಿಂದಾಗಿ ಹಳ್ಳಿಗಳ ಮಟ್ಟ ಅಧೋಗತಿಗೆ ಇಳಿಯುತ್ತಿದೆ. ಬಡವ

ಬಡವನಾಗಿಯೇ ಶ್ರೀಮಂತ ಶ್ರೀಮಂತನಾಗಿಯೇ ಉಳಿಯುವ ಪರಿಸ್ಥಿತಿ ಬಂದೊದಗಿದೆ. "ಆರಕ್ಕೆ ಏರಲ್ಲಾ ಮೂರಕ್ಕೆ ಇಳಿಯಲ್ಲ" ಎಂಬ ಗಾದೆಯಂತೆ. ಹಳ್ಳಿಗಳು ಈಗಲೂ ಕೂಡ ಬಡತನ ಬೇಗೆಯಲ್ಲಿ ಬೆಂದು ಹಾಳಾಗುತ್ತಾ ಇರುವುದನ್ನು ನಾವು ಕಾಣಬಹುದು.

ಇತ್ತೀಚೆಗೆ ಗ್ರಾಮಗಳಲ್ಲೂ ಕೂಡ ಅಂತರಜಾತಿಯ ವಿವಾಹಗಳು ಹೆಚ್ಚಾಗಿ ಕಂಡುಬರುತ್ತಿದೆ. ಈ ಅಂತರ್‌ಜಾತಿ ವಿವಾಹದಿಂದ ಜಾತಿಪದ್ಧತಿಯನ್ನು ಹೋಗಲಾಡಿಸಬಹುದು, ಎಂಬ ಪರಿಜ್ಞಾನವಿಲ್ಲದೆ ಈ ಅಂತರ ಜಾತಿವಿವಾಹವು ಮಹಾಪಾಪ ಎಂಬಂತೆ ಪ್ರೀತಿಸಿ ವಿವಾಹವಾದ ಹುಡುಗಹುಡುಗಿಯರು ಗ್ರಾಮಗಳನ್ನು ಬಿಟ್ಟು ಪೇಟೆಯನ್ನು ಸೇರುವ ನೂತನ ವ್ಯವಸ್ಥೆಯನ್ನು ಕಾಣಬಹುದಾಗಿದೆ. ಇದಕ್ಕೆ ಸಾಕ್ಷಿಯೆಂಬಂತೆ ಕರೀಗೌಡ ಬೀಚನಹಳ್ಳಿಯವರ 'ಗೌರಿ' ಕತೆ ನಿದರ್ಶನವಾಗಿದೆ. ಈ ಗೌರಿ ಬೋಂಡ ಗುಂಡಮ್ಮನ ಮೊಮ್ಮಗಳು. ಜವಾಬ್ದಾರಿಯಿಲ್ಲದ ಅಪ್ಪ ತನ್ನ ಚಟಕ್ಕಾಗಿ ಎರಡು ಹೆಣ್ಣುಮಕ್ಕಳನ್ನು ಹುಟ್ಟಿಸಿ ಮಂಡ್ಯದಲ್ಲಿ ಯಾವುದೋ ಕೊಲೆಯ ವಿಷಯದಲ್ಲಿ ಸಿಕ್ಕಿಕೊಂಡು ಈ ವಿಷಯ ತಿಳಿದ ಆಕೆಯ ತಾಯಿ ಕೊನೆಯುಸಿರೆಳೆದಳು. ಗುಂಡಮ್ಮನ ಮಗಳು ಸತ್ತ ನೋವಿನಿಂದ ನರಳುತ್ತಿರುವ ಸಂದರ್ಭದಲ್ಲಿ ಗೌರಿ ಹಳೇ ಪೇಟೆ ಸಾಬರ ಹುಡುಗನೊಬ್ಬನನ್ನು ಪ್ರೀತಿ ಮಾಡಿ ಅವನ ಸಹವಾಸಕ್ಕೆ ಬಿದ್ದು ರಾತ್ರೋರಾತ್ರಿ ಊರುಬಿಟ್ಟು ಓಡಿಹೋದಳು. ಅವಳು ಹೋದಮೇಲೆ 'ಸುಟ್ಟಗಾಯದ ಮೇಲೆ ಮತ್ತೆ ಬರೆ' ಎಂಬಂತೆ ಆ ಯೋಚನೆಯಿಂದಲೇ ತೀರಿಕೊಂಡಳು. ಈ ಹಳ್ಳಿಗಾಡಿನ ಜನ ಜಾತಿಗೆ ಹೆಚ್ಚು ಮಹತ್ವವನ್ನು ಕೊಡುತ್ತಾರೆ. ಗ್ರಾಮಗಳಲ್ಲಿ ಕಂಡುಬರುವ ಈ ಜಾತಿಪದ್ಧತಿ ಇಂದಿನ ರಾಜಕೀಯ ಪಕ್ಷಗಳ ಅಸ್ತ್ರವಾಗಿ ಜಾತಿಬೆಂಬಲದಿಂದ ಈ ಒಂದು ರಾಜಕೀಯ ಪಕ್ಷಗಳು ಬೆಳೆಯುತ್ತಿವೆ ಎಂದರೆ ತಪ್ಪಾಗಲಾರದು. ಹಳ್ಳಿಗಾಡಿನಲ್ಲಿ ಒಂದೇ ಜಾತಿಯ ಹುಡುಗ ಅಥವಾ ಹುಡುಗಿ ಮದುವೆ ಮಾಡಿಕೊಂಡರೆ ಗೌರವ ಕೊಡುವಷ್ಟು, ಅನ್ಯಜಾತಿ ವಿವಾಹ ಮಾಡಿಕೊಂಡರೆ ಮರ್ಯಾದಿ ಗೌರವ ಕೊಡದೆ ಅವರನ್ನು ಊರಿನಿಂದ ಹೊರಹಾಕುವ ವ್ಯವಸ್ಥೆ ಕಟ್ಟುನಿಟ್ಟಾಗಿ ನಡೆದುಕೊಂಡು ಬಂದಿದೆ. ಇಂದಿಗೂ ಈ ಪದ್ಧತಿ ನಡೆಯುತ್ತಾನೆ ಇವೆ.

ಅಂತರ್‌ಜಾತಿ ವಿವಾಹವಾದ ಗೌರಿ ಮತ್ತು ಮಹಮದ್ ಬಹಳ ಸಂತೋಷವಾಗಿ ಬಹಳಷ್ಟು ಹಣ ಸಂಪಾದನೆ ಮಾಡಿ ಸುಖದ ಜೀವನ ನಡೆಸುತ್ತಿದ್ದರು. ಗೌರಿಯ ಅಂತರ್‌ಜಾತಿ ವಿವಾಹವನ್ನು ಪ್ರೋತ್ಸಾಹಿಸಿದಂತೆ ಒಂದು ಲೇಖನವನ್ನು ಕಂಡು ಹರ್ಷಗೊಂಡ ಗೌರಿ ಮನ ತುಂಬಿತು. ಆ

ಲೇಖನವು ಅಂತರ್‌ಜಾತಿ ವಿವಾಹ ಜೀವನದ ಮೇಲೆ ಯಾವ ಕೆಟ್ಟ ಪರಿಣಾಮವನ್ನು ಬೀರುವುದಿಲ್ಲ. ಅಂತರ್ ಜಾತಿಯ ವಿವಾಹದಿಂದ ಜಾತಿ ಎಂಬ ಭೂತವನ್ನು ನಾಶಪಡಿಸಿಬಿಡಬಹುದು ಎಂಬುವುದನ್ನು ತೋರಿಸಿಕೊಟ್ಟರು.

ಇಲ್ಲಿ ಗೌರಿಯ ಗಂಡನಿಗೆ ಫ್ಯಾಕ್ಟರಿಯಲ್ಲಿ ಖಾಯಂ ಕೆಲಸದ ಜೊತೆಗೆ ಒಂದು ಫ್ರೀ ಸೈಟ್ ಸಿಕ್ಕಿರುವುದರ ಬಗ್ಗೆ ಗೌರಿ ಸಂತೋಷದಿಂದ ಹೇಳಿದಳು. ಇಬ್ಬರೂ ನೆಮ್ಮದಿಯ ಜೀವನ ನಡೆಸುತ್ತಿರುವ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡಳು. ಈ ರೀತಿಯ ಅಂತರ್‌ಜಾತಿ ವಿವಾಹ ಮಾಡಿಕೊಂಡಿದ್ದರಿಂದ ಅವರು ಛಲದ ಬದುಕನ್ನು ನಡೆಸಿದರು ಎಂಬುದನ್ನು ತಿಳಿಸುತ್ತದೆ.

ಸಂಪ್ರದಾಯದ ನೆರಳಿನಲ್ಲಿ ಬೆಳೆದಿರುವ ಹಳ್ಳಿಗಳು ತಮ್ಮದೇ ಆದ ಆಚಾರವಿಚಾರಗಳನ್ನು ಉಳಿಸಿ ಬೆಳೆಸಿ ಕಾಪಾಡಿಕೊಂಡು ಬಂದಿವೆ. ಅಲ್ಲಿನ ಜನರು ಅಳಿದರು, ಅವು ಮುಂದಿನ ಪೀಳಿಗೆಗೆ ಬಳುವಳಿಯಾಗಿರುವುದನ್ನು ಕಾಣಬಹುದು. ಹಳ್ಳಿಗಳಲ್ಲಿ ಬಡತನದ ಕಾರಣದಿಂದಾಗಿ ವಯಸ್ಸಿನ ಅಂತರವನ್ನು ಕಾಣದೆ ಚಿಕ್ಕಮಕ್ಕಳಿಗೆ ಮದುವೆ ಮಾಡುವುದನ್ನು ಕಾಣಬಹುದು. ಇದರಿಂದಾಗಿ ಬಾಲ ವಿಧವೆಯರ ಸಂಖ್ಯೆ ಹೆಚ್ಚಿತ್ತು. ಈ ವ್ಯವಸ್ಥೆಯನ್ನು ಸರಿಪಡಿಸಲು ಯಾವ ಜಾಗೃತ ಮನಸ್ಸುಗಳು ಕೂಡ ಕೂಡಿಕೆ ಪದ್ಧತಿಯನ್ನು ಬಹಿಷ್ಕರಿಸಿ ಬಹಿರಂಗವಾಗಿ ಮದುವೆ ಮಾಡಿಕೊಳ್ಳುವ ಪ್ರಯತ್ನ ಮಾಡುವುದು ಕಂಡುಬರಲಿಲ್ಲ. ಅಂತಹ ಪ್ರಯತ್ನ ಅತಿ ವಿರಳವಾಗಿತ್ತು.

'ಹಂದಿಲಕ್ಕವ' ಎಂಬ ಕತೆಯಲ್ಲಿ ಕಂಡುಬರುವ ಸಾಮಾಜಿಕ ಪ್ರಜ್ಞೆ ನಗರವಾಸಿಗಳನ್ನು ಅಥವಾ ವಿದ್ಯಾವಂತರನ್ನು ಬೆರಗುಗೊಳಿಸುವಂತಹದು. ಒಂದು ಕಡೆ ಸಂಸಾರದ ಸಮಸ್ಯೆಗಳಿಂದಾಗಿ ಮನೆಬಿಟ್ಟು ಅಪ್ಪನ ಮನೆಯನ್ನು ಸೇರಿದ ಹೆಣ್ಣು ಮತ್ತೊಂದು ಕಡೆಗೆ ಮದುವೆಯಾಗಿ ವಿಧವೆಯಾಗಿ ಅಪ್ಪನ ಮನೆ ಸೇರಿದ ಹೆಣ್ಣಿಗೆ ಹೊಸ ಬಾಳನ್ನು ಕೊಟ್ಟು, ಅವಳು ಜೀವನವನ್ನು ಹಸನು-ಗೊಳಿಸಿದನ್ನು ನಾವು ಕಾಣಬಹುದು. ಎರಡು ಮದುವೆ ಮಾಡಿಕೊಂಡರು ಇಬ್ಬರನ್ನು ಸಮರೀತಿಯಾಗಿ ಸರಿದೂಗಿಸಿಕೊಂಡು ಹೋಗುವ ಯಜಮಾನನ ಚಾಣಕ್ಷತೆ ಮೆಚ್ಚುವಂತಹದು. ಹೀಗೆ ಒಂದು ಹೆಣ್ಣನ್ನು ಬಿಟ್ಟು ಮತ್ತೊಂದು ಹೆಣ್ಣನ್ನು ಬಯಸುವ ಜನರಿರುವ ಈ ಕಾಲದಲ್ಲಿ ಗೌಡ ಇಬ್ಬರನ್ನು ನೋಡಿಕೊಳ್ಳುವ ಪರಿ ಅಚ್ಚರಿ ಮೂಡಿಸುವಂತಹದು.

ಕಾಡಣ್ಣನಂತಹ ಆದರ್ಶ ವ್ಯಕ್ತಿ ಸಾವಿರದಲ್ಲಿ ಒಬ್ಬರು ಮಾತ್ರ ಆ ಊರಿನಲ್ಲಿ 'ಹಂದಿ ಲಕ್ಕವ್ವ' ಎಂಬ ಹಂದಿ ಕಾಯುವ ಅನಾಥ ಹೆಂಗಸಿಗೆ ತನ್ನ ಮನೆಯಲ್ಲಿ ಆಶ್ರಯಕೊಟ್ಟು, ಆಕೆ ಸತ್ತಾಗ ತನ್ನ ಮಗನಿಂದಲೇ ಸಂಸ್ಕಾರ ಮಾಡಿಸುತ್ತೇನೆ

ಎಂಬ ಭರವಸೆ ಕೊಡುತ್ತಾನೆ. ಇವನು ಆಕೆಗೆ ಮನೆಯಲ್ಲಿ ಆಶ್ರಯ ಕೊಟ್ಟಿದ್ದರಿಂದ ಹೆಂಡತಿಯರು ಇಬ್ಬರು ಜಗಳವಾಡಿದ್ದರೂ ಅದನ್ನು ಲೆಕ್ಕಿಸಲಿಲ್ಲ. ಇಡೀ ಊರಿಗೆ ಊರು ವಿರುದ್ಧ ಮಾಡಿದರೂ ಕೂಡ ಅದನ್ನು ಧಿಕ್ಕರಿಸುವ ಸ್ಥೈರ್ಯವಂತ. ಈತ ಸಮಾಜಕ್ಕೆ ಮಾದರಿಯ ವ್ಯಕ್ತಿಯಾಗಿ ನಡೆದು-ಕೊಂಡಿರುವುದನ್ನು ಕಾಣಬಹುದು.

ನೊಂದ ಮಹಿಳೆಗೆ ಸಮಾಧಾನ ಹೇಳಿ ಅವಳಲ್ಲಿ ಆತ್ಮಸ್ಥೈರ್ಯವನ್ನು ತುಂಬಿ ಬೇರೆಯವರ ಮಾತಿಗೆ ಕಿವಿಗೊಡದೆ ಧೈರ್ಯದಿಂದ ಇರುವಂತೆ ಹೇಳಿದರು. ಆದರೂ ಮನನೊಂದ ಮಹಿಳೆ ಹಂದಿಯನ್ನೆಲ್ಲಾವನ್ನು ಅವರಿಗೆ ಬಿಟ್ಟು ಆಕೆ ಸಿಗದಷ್ಟು ದೂರ ಹೋಗುತ್ತಾಳೆ. ಯಾವುದೇ ಸಂಬಂಧವಿಲ್ಲದ ಆ ಹೆಂಗಸಿನ ಬಗ್ಗೆ ಅವರು ತೋರುವ ಅನುಕಂಪ ಮೆಚ್ಚುವಂತಹದು.

ಆಧುನಿಕ ಜಗತ್ತಿನಲ್ಲಿ ನಗರ ಪ್ರದೇಶಗಳು ಬೃಹದಾಕಾರವಾಗಿ ಬೆಳೆದರೂ ಗಾಂಧಿ ಕಂಡ ರಾಮರಾಜ್ಯದ ಕನಸು ಕನಸಾಗಿಯೇ ಉಳಿದಿದೆ. ಗ್ರಾಮೀಣ ಜನರ ಬದುಕು ಚಿಂತಾಜನಕವಾಗಿದೆ. ಹಳ್ಳಿಗಾಡಿನ ಜನರಿಗೆ ಸಮಸ್ಯೆಗಳೇ ಬದುಕಾಗಿದೆ. ಅನೇಕ ಸಮಸ್ಯೆಗಳ ನಡುವೆಯು ನಲಿಯುವ ಮುಳ್ಳಿನ ಗುಲಾಬಿಯಂತೆ ಅವರ ಜೀವನ ಅಂಧಕಾರ, ಅಕ್ಷರಜ್ಞಾನವಿಲ್ಲದ ಮೌಢ್ಯತೆಯ ಬದುಕು ಸಾಗಿಸುತ್ತಿದ್ದಾರೆ.

ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿ ಪ್ರಮುಖವಾಗಿ ಕಂಡುಬರುವ ಅಂಶ ಮೂಢನಂಬಿಕೆ. ಇದನ್ನು ನಾವು 'ಕರಿಮಣ್ಣಿನ ಗೊಂಬೆಗಳು' ಎಂಬ ಕತೆಯಲ್ಲಿ ಅಭಿವ್ಯಕ್ತವಾಗಿದೆ. ವ್ಯವಸಾಯವನ್ನು ತಮ್ಮ ಕುಲಕಸುಬನ್ನಾಗಿ ಮಾಡಿಕೊಂಡಂತಹ ರೈತ ತನ್ನ ಬೆಳೆ ನಾಶವಾದರೂ ಅದಕ್ಕೆ ತನ್ನ ಹಿರಿಯ ಹೆಂಡತಿಯೇ ಮಾಟ ಮಾಡಿಸಿದ್ದಾಳೆ ಎಂಬ ನಂಬಿಕೆಯಿಂದ ಪೂಜಾರಿಯ ಮೊರೆಹೋಗುವುದು. ಆ ಪೂಜಾರಿಯು ಇವರ ಮುಗ್ಧತೆಯನ್ನು ದುರುಪಯೋಗಪಡಿಸಿಕೊಳ್ಳುವುದನ್ನು ನಾವು ನೋಡಬಹುದು.

ಪ್ರಸ್ತುತ ಜಗತ್ತು ಕಂಪ್ಯೂಟರ್ ಯುಗದಲ್ಲಿದ್ದರೂ ಹಳ್ಳಿಗಳಲ್ಲಿ ಇಂದಿಗೂ ಮಾಟಮಂತ್ರ ಎಂದು ನಂಬಿ ತಾವು ಕಷ್ಟಪಟ್ಟು ದುಡಿದುದನ್ನು ಪೂಜೆಗಾಗಿ ಪೂಜಾರಿಗಳ ಹೊಟ್ಟೆ ತುಂಬಿಸುವುದನ್ನು ಕಾಣಬಹುದಾಗಿದೆ. ಪ್ರಜ್ಞಾವಂತರು ವೈಜ್ಞಾನಿಕ ಕಾರಣವನ್ನು ಕೊಟ್ಟರು ನಂಬದೆ, ಪೂಜಾರಯ್ಯನ ಮೊರೆಹೋಗುವುನ್ನು ಕಾಣಬಹುದು. ಅವರ ಸ್ವಂತ ಬುದ್ಧಿಯಿಂದ ವಿವೇಚಿಸುವ ಪರಿವು ಅವರಿಗೆ ಇರುವುದಿಲ್ಲ. ಅಂತಹ ಅನಾಗರಿಕತೆ ನಮ್ಮ ಹಳ್ಳಿಗರಲ್ಲಿ ಕಂಡುಬರುತ್ತದೆ.

ಗ್ರಾಮದ ಜನರು ಎಷ್ಟರಮಟ್ಟಿಗೆ ಮೂಢನಂಬಿಕೆಗೆ ಬಲಿಯಾಗುತ್ತಾರೆ ಎಂಬುವುದಕ್ಕೆ ಒಂದು ಪ್ರಸಂಗವನ್ನು ನಾವು ಗಮನಿಸಬಹುದು. "ನೋಡು ಕಾಡ್ಯ

ನನ್ನ ಮೇಲೆ ನೀನು ಮೊದಲಿನಿಂದಲೂ ವಿಶ್ವಾಸ, ನಂಬಿಕ ಇಟ್ಟಿದ್ದಿ. ಅದು ನನಗೆ ಅರ್ಥವಾಗ್ತಾ ಇದೆ. ಅದಕ್ಕಾಗಿ ಈ ಕೆಲಸವನ್ನು ನಾನು ಒಪ್ಪಿಕೊಳ್ಳುತ್ತಾ ಇದ್ದೀನಿ, ಇರಲಿ ನಾನು ಕಿತ್ತರೆ ಗೊಂಬೆಗಳಿಗೆ ಬಲಿಕೊಡುವಂತಿಲ್ಲ. ಅದಕ್ಕೆ ಬೇರೆಬೇರೆ ಶಾಸ್ತ್ರಗಳಿಗೆ ಅವುಗಳನ್ನೆಲ್ಲಾ ಕೂಡಿಸಬೇಕು. ಅದಕ್ಕಾಗಿ ತುಂಬಾ ಖರ್ಚಿದೆ. ಆದ್ದರಿಂದ ನಾನೂರು ರೂಪಾಯಿ ಕೊಟ್ಟುಬಿಡು, ನಿನ್ನ ಎಲ್ಲ ಕೆಲಸವನ್ನು ಮಾಡಿಕೊಟ್ಟುಬಿಡ್ತೀನಿ" ಎಂದು ಕಾಡಯ್ಯನನ್ನು ಮರಳು ಮಾಡುವ ವೈಚಿತ್ರಕ್ಕೆ ಅವನ ಮಾತಿಗೆ ಎಂತಹವರು ಕೂಡ ಮರುಳಾಗಬೇಕು.

ಅವರ ಹೊಲದಲ್ಲಿ ಇಲ್ಲದ ಗೊಂಬೆ ಬದಲಾಗಿ ಬೇರೊಂದು ಗೊಂಬೆಗಳ ಊತುಹಾಕಿ ಪರಾರಿಯಾಗುವುದು. ಅಲ್ಲಿ ಜಾಗೃತ ಯುವಕರು ಅದನ್ನು ಕಂಡುಹಿಡಿದು ಅವನ ಯೋಗ್ಯತೆ ತನ್ನ ತಂದೆಗೆ ಗೊತ್ತಾಗುವಂತೆ ಮಾಡಿದ ಪ್ರಯತ್ನ ಎಲ್ಲಾ ಮೆಚ್ಚುವಂತಹದು. ಈ ರೀತಿಯಾಗಿ ಅವಿದ್ಯಾವಂತರ ರೀತಿ ಆಚಾರವಿಚಾರಗಳಿಗೆ ಬಲಿಯಾಗಿ ತಾವು ನರಳುವುದರ ಜೊತೆಗೆ, ಮನೆಮಂದಿಯೆಲ್ಲಾ ನರಳುವಂತೆ ಮಾಡುತ್ತಾರೆ. ಕೋಳಿ, ಕುರಿ ಎಂದು ಹೇಳಿ ದೇವರಿಗೆ ಹರಕೆಗಾಗಿ ಸಾವಿರಾರು ರೂಪಾಯಿ ವೆಚ್ಚಮಾಡುತ್ತಿದ್ದಾರೆ.

ಹಳ್ಳಿಗಳಲ್ಲಿ ಗೌಡ, ಪಟೇಲ, ಶ್ಯಾನಭೋಗ ಇವರ ಮಕ್ಕಳು ತಾವೇ ಹಳ್ಳಿ ರಾಜರು ಎಂಬಂತೆ ಬಡಹೆಣ್ಣುಗಳ ಮೇಲೆ ಅತ್ಯಾಚಾರ ನಡೆಸುವುದು ಬಹಳ ಹಿಂದಿನ ಕಾಲದಿಂದ ನಡೆದುಕೊಂಡು ಬಂದಿದೆ. ಈಗಲೂ ಕೂಡ ಹಳ್ಳಿಗಳಲ್ಲಿ ಈ ವ್ಯವಸ್ಥೆ ನಡೆದುಕೊಂಡು ಬಂದಿರುವುದನ್ನು ನಾವು ಕಾಣಬಹುದು. ಶ್ರೀಮಂತರಾದವರು ತಪ್ಪಿಸಿಕೊಳ್ಳುತ್ತಾರೆ. ಅವರ ಆಸೆಗೆ ಬಲಿಯಾದ ಹೆಣ್ಣುಮಕ್ಕಳು ಸಾವಿನಲ್ಲಿ ತಮ್ಮ ಜೀವನವನ್ನು ಕೊನೆಗೊಳಿಸಿಕೊಳ್ಳುತ್ತಾರೆ.

'ಆಸಕ್ತಿ' ಎಂಬ ಕತೆಯಲ್ಲಿ ಕದ್ದು ಬಸುರಿಯಾದ ಹೆಂಗಸು ಆತ್ಮಹತ್ಯೆ ಮಾಡಿಕೊಂಡರೆ ಅವಳನ್ನು ಸಂಸ್ಕಾರ ಮಾಡುವ ಪದ್ಧತಿ ವಿಚಿತ್ರವಾಗಿದೆ. ಅದೃಶ್ಯ ಅಮಾನವೀಯ ಕೃತ್ಯವಾಗಿ ಪರಿಣಮಿಸುತ್ತದೆ. ಪಟೇಲರ ಸಂಬಂಧಿಕರಿಂದ ಬಸುರಾಗಿದ್ದ ಚೆನ್ನಿ ಸಮಾಜವನ್ನು ಎದುರಿಸಲು ಹೆದರಿ ಕೆರೆಗೆ ಬಿದ್ದು ಸಾವನ್ನಪ್ಪಿದಾಗ ಅವಳನ್ನು ಸುಡಲು ಒಪ್ಪದೆ ಹೂಳಲು ಒಪ್ಪದೆ, ಹಾಗೆ ಮಾಡಿದರೆ ಮಹಾಪಾಪ ಎಂಬಂತೆ ಹೆದರುವ ಜನರು ನಾಳೆ ದಿನ ಚೆನ್ನಿ ಗಾಳಿಗೀಳಿ ಆಗಿ ನಮ್ಮ ಹೆಣ್ಣುಮಕ್ಕಳನ್ನು ಮುರಿದು ಗಿರಿದು ಕೂಂಟ್ರೆ ಎಂಬ ನಂಬಿಕೆಯಿಂದ ಭಯಭೀತರಾಗಿ "ಹೊಟ್ಟೆಯೊಳಗೆ ಮಗು ಇರುವುದರಿಂದ ಬಸುರಿ ಹೆಣ್ಣಿನ ಇಲ್ಲಿವರ್ಗ್ಗು ಯಂಗ್ ಮಾಡ್ತಾ ಬಂದಿದ್ದೀರಿ ಹಾಗೆನೇ ಇದ್ದೂ ಮಾಡ್ ಬಂದ್ರೆಲ" ಎಂದು ಹಿರಿಯರು ಹೇಳುವ ಮಾತು ಶೋಚನೀಯವೆನ್ನಿಸುತ್ತದೆ.

"ಸತ್ತವರ ಜೀವ ತೆಂಕಲ್ ಬಡಕಲ್" ಎಂಬಂತೆ ಅದರ ಅರಿವು ಇಲ್ಲದೆ ಜನರು ಹಳೆಯ ನಂಬಿಕೆಯನ್ನು ಇಂದು ಉಳಿಸಿಕೊಂಡು ಬರುತ್ತಿದ್ದಾರೆ. ಆ ಮೂಢನಂಬಿಕೆಯಲ್ಲಿ ಜನರು ನೊಂದು ಬೇಯುತ್ತಿದ್ದಾರೆ. ವೈಜ್ಞಾನಿಕವಾಗಿ ಜಗತ್ ಎಷ್ಟೆ ಮುಂದುವರಿದರೂ ಅವರು ಮಾತ್ರ ಮೂಢನಂಬಿಕೆ ಸುಳಿಯಲ್ಲಿ ಒದ್ದಾಡುತ್ತಾರೆ. ಮಾಳದ ಬೆಟ್ಟ ಗುಡ್ಡೆಯ ಬುಡಕ್ಕೆ ಬಂದು ಬಸುರಿಯನ್ನು ಕೂರಿಸುವ ಜಾಗದಲ್ಲಿ ಕೂರಿಸಿ ಆ ಶವಸಂಸ್ಕಾರವನ್ನು ಮುಗಿಸುತ್ತಾರೆ.

ಆಧುನಿಕತೆ ಎಷ್ಟೇ ಬೆಳೆದಿದ್ದರೂ ಹಳ್ಳಿಗಾಡಿನ ಜನರ ಜೀವನದಲ್ಲಿ ಯಾವುದೇ ವ್ಯತ್ಯಾಸವನ್ನು ನಾವು ಕಾಣುವುದಿಲ್ಲ. ವೈಜ್ಞಾನಿಕವಾಗಿ ನಾವು ಎಷ್ಟೇ ಮುಂದುವರಿದರೂ ಅದರ ಪರಿವೆಯಿಲ್ಲದೇ ಅನೇಕ ಹಳ್ಳಿಗಾಡಿನ ಜನರು ಮೂಢನಂಬಿಕೆಗೆ ಬಲಿಯಾಗು-ತ್ತಿದ್ದಾರೆ. ವಿದ್ಯಾವಂತರೂ ಕೂಡ ದೆವ್ವ, ಪ್ರೇತ, ಬಲಿ ಈ ಆಚಾರಗಳು ದಿನದಿಂದ ದಿನಕ್ಕೆ ಹೆಚ್ಚುತ ಬರುತ್ತಿವೆ. ದೇವರ ಹೆಸರಿನಲ್ಲಿ ಪ್ರಾಣಿವಧೆ ಹೆಚ್ಚಾಗುತ್ತದೆ.

ಹಳ್ಳಿಯ ಜನರು ಯಾವುದೇ ಕಾಯಿಲೆ ಕಸಾಲೆ ಬಂದರೂ ಅದಕ್ಕಿರುವ ವೈಜ್ಞಾನಿಕ ಕಾರಣವನ್ನು ಕಂಡುಕೊಳ್ಳದೇ ಈ ರೋಗವನ್ನು ಗುಣಪಡಿಸುವಂತೆ ದೇವರಲ್ಲಿ ಮೊರೆಹೋಗುವುದನ್ನು ನಾವು ಕಾಣಬಹುದು. ಹೀಗೆ ದೇವರು ದಿಂಡರು ಎಂದು ಬೇಡುತ್ತಾ ಸಮಯವನ್ನು ಕಳೆಯುತ್ತಿರುವಾಗಲೇ ಅವನ ರೋಗ ಬಲವಾಗುವ ಸಂಭವ ಹೆಚ್ಚು ಇರುತ್ತದೆ. ಇದನ್ನು ತಿಳಿಯದ ಜನರನ್ನು ಈ ಆಧುನಿಕ ಯುಗದಲ್ಲಿ ನಾವು ಕಾಣಬಹುದು. ಅದಕ್ಕೆ ಉದಾಹರಣೆ ಎಂಬುವಂತೆ 'ಗುಣಮುಖ' ಕತೆಯಲ್ಲಿ ವ್ಯಕ್ತವಾಗುವುದನ್ನು ನಾವು ಕಾಣಬಹುದು. ತನ್ನ ಅಳಿಯನನ್ನು ಕುರಿತು "ನಿಮಗೆ ಮೂಲೆ ರೋಗಾನೂ ಇಲ್ಲ, ನರದ ರೋಗಾನೂ ಇಲ್ಲ, ನಾನು ಶಾಸ್ತ್ರೀಗಳ ಹತ್ತಿರ ಹೋಗಿದ್ದೆ, ಒಂದು ತಿಂಗಳು ನಿಮ್ಮ ಅಳಿಯನಿಗೆ ಗ್ರಹಗತಿ ಸರಿಯಿಲ್ಲ, ಅವರಿಗೆ ಔಷಧಿ ಕೊಡಿಸಿದರೂ ಮೈಗೆ ಹತ್ತಲ್ಲ ಎಂದು ಹೇಳಿ ನಿಂಬೆಹಣ್ಣನ್ನು ಮಂತ್ರಿಸಿ ಕೊಡುವರು. ನಿಜವಾಗಲೂ ಈಗಿನ ಕಾಯಿಲೆಗೆ ಈ ರೀತಿಯ ಔಷಧಿ ಕೊಟ್ಟರೆ ಕಾಯಿಲೆ ಹೋಗಲು ಸಾಧ್ಯವೇ ಎಂಬುದನ್ನು ಯೋಚಿಸದ ಅನಾಗರಿಕ ಜನರನ್ನು ನಾವು ಹಳ್ಳಿಗಳಲ್ಲಿ ಕಾಣಬಹುದು. ವಿದ್ಯಾವಂತನಾದ ಅಳಿಯನು ಕೂಡ ಈ ಮೂಢನಂಬಿಕೆಗೆ ಬಲಿಯಾಗಬೇಕಾಗುತ್ತಾನೆ.

**'ಜೊತೆಗಾತಿ'** ಎಂಬ ಕತೆಯಲ್ಲಿ ಹಳ್ಳಿಗಳಲ್ಲಿ ಆಗಬೇಕಾದ ಅಥವಾ ಮಾಡಬಹುದಾದ ಬದಲಾವಣೆಯನ್ನು ಒಬ್ಬ ಯುವಕನ ಮೂಲಕ ತೋರಿಸಿ-ಕೊಟ್ಟಿದ್ದಾರೆ. ಕೂಡಿಕೆ ಪದ್ಧತಿಯನ್ನು ಬಹಿಷ್ಕರಿಸಿ ಆಕೆಯನ್ನು ಮರುವಿವಾಹವನ್ನು ಮಾಡಿಕೊಳ್ಳಬೇಕು ಎಂದು ಬಯಸಿದ್ದಾನೆ. ಇದು ನಿಜವಾಗಲೂ ಪ್ರಗತಿವಾದವೇ ಸರಿ. ಈ ರೀತಿಯ ಧೈರ್ಯ ಸಾಹಸದ ಕೆಲಸಕ್ಕೆ ಯಾವ ಯುವಕನು ಪ್ರಯತ್ನಿಸುವುದು

ಕಷ್ಟಸಾಧ್ಯ. ನಾನು ನೇತ್ರಾವತಿಯನ್ನು ಮದುವೆಯಾಗುತ್ತೇನೆ. ಅವಳನ್ನು ಬಿಟ್ಟು ನಾನು ಬೇರೆಯವರನ್ನು ಮದುವೆಯಾಗುವುದಿಲ್ಲ ಎಂದು ನಿರ್ಧಾರ ಕೈಗೊಂಡಾಗ, ಅವರ ಅಪ್ಪ ಅಮ್ಮ ಬಹಳವಾಗಿ ವಿರೋಧಿಸಿ ನಾನು ಬದುಕಿರುವವರೆವಿಗೂ ಸಾಧ್ಯವಿಲ್ಲ ಎಂದು ತಮ್ಮ ನಿರ್ಧಾರನವನ್ನು ತಿಳಿಸಿದರು.

ನೇತ್ರಾವತಿಯ ಪೂರ್ವಚರ ತಿಳಿದಾಗ ಅವಳಿಗೆ ನಿಜವಾಗಲೂ ಬಾಳು ಕೊಡಬೇಕೆಂದು ತೀರ್ಮಾನಿಸಿ ತನ್ನ ತಂದೆತಾಯಿ ಮನಸ್ಸನ್ನು ಬದಲಾಯಿಸಲು ಪ್ರಯತ್ನಿಸಿದ. ನಿಷ್ಟುರವಾಗಿ ಮಾತನಾಡಿದ ತಂದೆ ನಾನು ಬದುಕಿರುವವರೆವಿಗೂ ಈ ಮದುವೆ ಸಾಧ್ಯವಿಲ್ಲ ಎಂದು ಹೇಳಿದ ವ್ಯಕ್ತಿಯ, ತಾನು ಕೊನೆಯುಸಿರು ಎಳೆಯುವ ಸಂದರ್ಭದಲ್ಲಿ ಆಕೆಯನ್ನು ಕರೆದು ತಾ, ನಾನು ಅವಳನ್ನು ಕಂಡು ನಿಮ್ಮಿಬ್ಬರ ಮದುವೆಯನ್ನು ನೋಡಿ ಸಾಯುತ್ತೇನೆ' ಎಂದು ತಿಳಿಸಿದನು. ಕೊನೆಯಲ್ಲಿ ಆತನ ತಂದೆಯ ಮನಪರಿವರ್ತನೆಯನ್ನು ಮೆಚ್ಚುವಂತದೆ. ತನ್ನ ಮಗನ ಸವಾಲಿನ ಮುಂದೆ ಆತ ನಿಷ್ಪ್ರಯೋಜಕನಾದನು.

ಈ ಕತೆಯಲ್ಲಿ ಕರೀಗೌಡ ಬೀಚನಹಳ್ಳಿಯವರು ಆಧುನಿಕ ಸಮಾಜದಲ್ಲಿ ಯಾವ ರೀತಿ ಬದಲಾವಣೆಗಳನ್ನು ನಾವು ಮಾಡಲು ಸಾಧ್ಯ ಎಂಬುದನ್ನು ತಿಳಿಸಿಕೊಟ್ಟಿದ್ದಾರೆ. ಈ ರೀತಿ ನೂತನ ಬದಲಾವಣೆಗೆ ಈ ಸಮಾಜದಲ್ಲಿ ಮಾನ್ಯತೆ ಬಹಳ ಮುಖ್ಯವಾದದ್ದು. ಬಹಳ ಹಿಂದಿನ ಕಾಲದಲ್ಲಿ ಅನಿಷ್ಟ ಪದ್ಧತಿಗಲಾದ ಬಾಲ್ಯವಿವಾಹ, ವಿಧವಾ ವಿವಾಹ ನಿಷೇಧದಿಂದಾಗಿ ಅನೇಕ ಹೆಣ್ಣು ಮಕ್ಕಳನ್ನು ಕಂದಾಚಾರ, ಮೂಢನಂಬಿಕೆ ಎಂಬ ಕತ್ತಲೆಯ ಕೋಣೆಯಲ್ಲಿ ಕೊಳೆಯುವಂತೆ ಮಾಡುತ್ತಿದ್ದರು. ಆದರೆ ಜಾಗೃತಗೊಂಡ ತರುಣರು ಅಥವಾ ಪ್ರಜ್ಞಾವಂತರು ಮಾಡಿದ ಒಳ್ಳೆಯ ಕೆಲಸವನ್ನು ಮತ್ತೊಬ್ಬ ನೋಡಿ ತಾನು ಕೂಡ ಈ ರೀತಿ ಮಾಡಬೇಕು ಎಂದು ಆಲೋಚಿಸಿದ್ದರಿಂದ ಸಮಾಜದಲ್ಲಿ ಅಲ್ಪಸ್ವಲ್ಪ ಸುಧಾರಣೆಗಳಾಗುವುದನ್ನು ನಾವು ಕಾಣಬಹುದಾಗಿದೆ.

ಇತ್ತೀಚೆಗೆ ಸಾಮಾನ್ಯವಾಗಿ ಕಂಡುಬರುವ ಅರ್ಥಹೀನ ವ್ಯವಸ್ಥೆಯಾದರೆ ದೇವರಿಗೆ ಹರಕೆಯನ್ನು ಒಪ್ಪಿಸಿ ತಮ್ಮ ಇಷ್ಟಾರ್ಥವನ್ನು ಪೂರೈಸಿಕೊಳ್ಳುವುದು. ಇದಕ್ಕೆ ಸಾಕ್ಷಿ ಎಂಬಂತೆ 'ಅಭಾವ' ಕತೆಯಲ್ಲಿ ದೇವರಿಗೆ ಹರಕೆ ಹೊತ್ತಿದ್ದರಿಂದಲೇ ತನ್ನ ದಮ್ಮು ಕಡಿಮೆಯಾಯಿತು ಎಂಬ ಭ್ರಮೆಯಲ್ಲಿ ಬದುಕುವ ಮಂದಿಯನ್ನು ನೋಡಿದಾಗ, ಎಂತಹ ನಂಬಿಕೆಯಪ್ಪ? ಎಂದು ಜನರು ಈ ನಂಬಿಕೆಗೆ ಅರ್ಥವಿದೆಯೇ? ಎಂಬ ಪ್ರಶ್ನೆಯು ನಮ್ಮಲ್ಲಿ ಮೂಡುತ್ತದೆ. ಹೀಗೆ ದೇವರು ದಿಂಡರು ನಂಬಿ ತಮ್ಮ ಎಲ್ಲಾ ಕಾಯಿಲೆಗೂ ಇವರೆ ಸಾಕು ಎಂಬಂತಿದ್ದಾರೆ. ಡಾಕ್ಟರ್ ಅವಶ್ಯಕತೆ ಇರುತ್ತಿರಲಿಲ್ಲ. ಈ ದಮ್ಮು ಏಕೆ ಬರುತ್ತದೆ. ಅದನ್ನು ಗುಣಪಡಿಸಿಕೊಳ್ಳುವುದು ಹೇಗೆ ಎಂಬುವುದನ್ನು ಮೊದಲು ಅರಿತಾಗ ಮಾತ್ರ ಈ ರೋಗ ನಿರ್ವಹಣೆ ಸಾಧ್ಯ. ಅದು ಏಕೆ ಬರುತ್ತದೆ

ಎಂದರೆ ಅಡುಗೆ ಮಾಡುವಾಗ ಅದರಿಂದ ಬರುವ ಹೊಗೆಯನ್ನು ನಾವು ಸೇವಿಸಿದ ಸಂದರ್ಭದಲ್ಲಿ ಈ ಕಾಯಿಲೆ ಬರುತ್ತದೆ ಎಂಬುವುದು ಸತ್ಯ.

ಇತ್ತೀಚೆಗೆ ವಿದ್ಯಾವಂತರೆ ಹೆಚ್ಚಾಗಿ ದೇವರುದಿಂಡರು ಜಾತಿ ಎಲ್ಲವನ್ನು ಆಚರಣೆಗೆ ತರುತ್ತಿದ್ದಾರೆ. ಮಗುವಿಗೆ ದಾಸಯ್ಯನ ಕೈಯಿಂದ ಹೆಸರನ್ನು ಇಡಿಸಲಿಲ್ಲ. ದೇವರಿಗೆ ಕೂದಲು ಕೂಡಲಿಲ್ಲ. ಮಗುವಿಗೆ ಕಿವಿಯನ್ನು ಚುಚ್ಚಿಸಲ್ಲ ಎಂಬ ಕೊರಗು ಅನೇಕ ಅಜ್ಜಿಯರಲ್ಲಿ ಕೇಳಿಬರುತ್ತಿದೆ. ಶ್ರೀಮಂತನಾದ ವ್ಯಕ್ತಿ ನಗರಕ್ಕೆ ಬಂದಾಗ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಜನರಿಗೆ ತೋರ್ಪಡಿಸುವ ಉದ್ದೇಶದಿಂದ ವಜ್ರದ ಕಿರೀಟವನ್ನು ಮಾಡಿಸುತ್ತೇನೆ ಎಂದು ಪೇಪರ್‌ನಲ್ಲಿ ಜಾಹೀರಾತು ಹಾಕಿಸಿಕೊಳ್ಳುವವರನ್ನು ನಾವು ಕಾಣಬಹುದು. ಸಾಮಾನ್ಯವಾಗಿ ಬಡರೈತ ಕುಟುಂಬಗಳು ತಾವು ಹರಕಲು ಸೀರೆಯುಟ್ಟಿದ್ದರು ಚಿಂತೆಮಾಡುವುದಿಲ್ಲ. ದೇವರಯಾತ್ರೆಗಾಗಿ ಸಾವಿರಾರು ರೂಪಾಯಿ ಖರ್ಚುಮಾಡುತ್ತಾರೆ.

ಈ ಕತೆಗಳ ಮೂಲಕ ಕರೀಗೌಡ ಏನನ್ನು ತಿಳಿಯಪಡಿಸಲು ಬಯಸುತ್ತಾರೆ ಎಂದರೆ ದೇವರು ಸಕಲರಿಗೂ ಒಳ್ಳೆಯದನ್ನು ಬಯಸುವ ದಯಾಮಯಿ. ದೇವರು ಜನರಿಂದ ಏನನ್ನು ಬಯಸುವುದಿಲ್ಲ. ಆದರೆ ಅಜ್ಞಾನಿಗಳಾದ ಜನರಿಗೆ ಅದರ ಪರಿವೆ ಇರುವುದಿಲ್ಲ. ಯಾರೊ ಒಬ್ಬ ಕುರಿ ಕಡಿದರೆ ಮತ್ತೊಬ್ಬರು ಕೋಳಿ ಬಲಿ ಕೊಡುವುದು. ಇವು ಸಮಾಜಕ್ಕೆ ಮಾರಕವಾದ ಅನಿಷ್ಟ ಪದ್ಧತಿಗಳು ಈ ಪದ್ಧತಿಯ ತೊಡೆದು ಹಾಕಿ ಮನುಷ್ಯರು ಜಾಗ್ರತೆಗೊಳ್ಳಬೇಕು. ಜಾಗೃತಗೊಂಡ ವ್ಯಕ್ತಿ ತನ್ನ ಸುತ್ತಮುತ್ತಲೂ ಅಜ್ಞಾನದ ಅಂಧಕಾರದಿಂದ ಬೇಯುತ್ತಿರುವ ಮಂದಿಯನ್ನು ವಿಚಾರಿಸಬೇಕು. ಅವರು ಮಾಡುತ್ತಿರುವ ಅನಿಷ್ಟ ಪದ್ಧತಿಗಳ ಬಗ್ಗೆ ತಿಳಿ ಹೇಳಿ ಜಾಗೃತಗೊಳಿಸಿದಾಗ, ಆತನ ಆ ಕಾರ್ಯದ ಬಗ್ಗೆ ಚಿಂತಿಸಿ ಅದರ ಸರಿ ತಪ್ಪುಗಳನ್ನು ಅರಿಯುತ್ತಾನೆ. ಆಗ ಅನಾವಶ್ಯಕವಾಗಿ ವ್ಯಯ ಮಾಡುತ್ತಿದ್ದ ಹಣ ಮತ್ತು ಸಮಯವನ್ನು ಸದುಪಯೋಗ-ಪಡಿಸಿಕೊಳ್ಳುತ್ತಾನೆ. ಆಗ ವ್ಯಕ್ತಿ ಬಡತನ ಬೇಗೆಯಿಂದ ತಪ್ಪಿಸಿಕೊಂಡು ಸುಖಕರವಾದ ಜೀವನ ನಡೆಸಬಹುದು. ತನ್ನ ಕುಟುಂಬವು ಸಂತೋಷದ ಜೀವನ ನಡೆಸುತ್ತಾನೆ. ಈ ರೀತಿ ಜಾಗೃತ ಮನೋಭಾವ ಹಳ್ಳಿಗಾಡಿನ ಪ್ರತಿಯೊಬ್ಬರಲ್ಲೂ ಹುಟ್ಟಬೇಕು ಎಂಬುವುದೇ ಕರೀಗೌಡರ ಆಶಯವಾಗಿದೆ ಎಂದರೆ ತಪ್ಪಾಗಲಾರದು.

ಕರೀಗೌಡರ ಕತೆಗಳಲ್ಲಿ ಕಂಡುಬರುವ ಜಾತಿವ್ಯವಸ್ಥೆ ಬಹಳ ಘೋರವಾಗಿ ಚಿತ್ರಿತವಾಗಿದೆ. ಗೌಡ ತನ್ನ ದರಬಾರಿನಲ್ಲಿ ಹಳ್ಳಿಯ ಜನಾಂಗವನ್ನು ತುಚ್ಛವಾಗಿ ಕಾಣುತ್ತಾನೆ. ಕೆಳವರ್ಗ ಈ ಗೌಡನಿಂದ ಪಡೆದ ಸಾಲ ತೀರುವ ತನಕ ಆತನ ಮನೆಯಲ್ಲಿ ಜೀತದಾಳಾಗಿ ದುಡಿಯುವ ಪ್ರಸಂಗವನ್ನು ನಾವು ಕಾಣಬಹುದಾಗಿದೆ. ಹೀಗೆ ಜೀತ ಮಾಡಿಸಿಕೊಳ್ಳುವ ಸಂದರ್ಭದಲ್ಲಿ ಅವರೊಂದಿಗೆ ವ್ಯವಹರಿಸುವ ರೀತಿ

ಬಹಳ ಕ್ರೂರವಾಗಿರುತ್ತದೆ. ಅದನ್ನು ಕಣ್ಣಾರೆ ನೋಡಿದಾಗ ಆ ವಿದ್ರಾಹಕ ದೃಶ್ಯವನ್ನು ಮರೆಯಲೂ ಸಾಧ್ಯವಿಲ್ಲ.

ಈ ಜೀತಪದ್ಧತಿಗೆ ಸಾಕ್ಷಿ ಎಂಬಂತೆ 'ಉಗುಳು' ಕಥೆ ಸಾಕ್ಷಿಯಾಗಿದೆ. ಒಂಭತ್ತು ಕಂಬದ ಪಡಸಾಲೆಯನ್ನು ಹೊಂದಿದ ಗೌಡ ಪಡಸಾಲೆಯ ಮೇಲೆ ಕೂತ ಗೌಡರು ಒಮ್ಮೆ ಅಂಗಳವನ್ನೂ ಒಮ್ಮೆ ಪಡಸಾಲೆಯನ್ನು ನಿಟ್ಟಿಸಿರು ಬಿಟ್ಟು ದಿಟ್ಟಿಸಿದಾಗ ಮನೆಯು ತುಂಬ ಸ್ವಚ್ಛವಾಗಿರಬೇಕು ಯಾವುದೇ ರೀತಿಯ ಗಲೀಜು ಕಾಣುವ ಹಾಗೆ ಇರಲಿಲ್ಲ. ಹಾಗೇನಾದರೂ ಗಲೀಜು ಕಂಡು ಬಂದರೆ ಅವಳ ಕತೆ ಮುಗಿಯಿತು ಎಂಬ ಅರ್ಥ. ಹೀಗೆ ಯಾವ ತೊಂದರೆಯಾಗದ ರೀತಿ ಸ್ವಚ್ಛತೆ ಕಾಪಾಡಿಕೊಳ್ಳಬೇಕಾಗಿತ್ತು. ಇವರ ಮನೆಯಲ್ಲಿ ಕೆಲಸಮಾಡುವವಳನ್ನು ಬಹಳ ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದನು.

ಜೀತದಾಳುಗಳಿಗೆ ಗೌಡರೆಂದರೆ ಬಹಳ ಹೆದರಿಕೆ. ಅವನ ಧ್ವನಿ ಕೇಳಿದರೆ ಸಾಕು ಅವರು ತಾವು ಕೆಲಸ ಮಾಡುತ್ತಿದ್ದುದ್ದನ್ನು ಬಿಟ್ಟು ಬರಬೇಕಾಗಿತ್ತು. ಇದಕ್ಕೆ ಉದಾಹರಣೆ ಎಂಬಂತೆ ಯಾರೂ ಗಲೀಜು ಮಾಡಿದಕ್ಕೆ ದನಿ ಇಡೀ ಹಟ್ಟಿಯನ್ನೆಲ್ಲಾ ಮೊಳಗಿ ಹಿತ್ತಲಲ್ಲಿ ಉಚ್ಚೆ ಉಯ್ಯುತ್ತಾ ಕೂತಿದ್ದ ಚಿಕ್ಕಿಯು ತನ್ನ ಇನ್ನರ್ಧ ಉಚ್ಚೆಯನ್ನು ಲಂಗದಲ್ಲೇ ಕಟ್ಟಿಕೊಂಡು ಒಂದೇ ದಾಪುಗಾಲಿಗೆ ಬಂದೆ ಎನ್ನುತ್ತಾ ಓಡಿಬಂದು ಹುಲಿಯ ಮುಂದೆ ಆಕಳು ನಿಂತಂತೆ ನಿಂತಳು. ಅವಳ ಭಯವನ್ನು ಗಮನಿಸಿದ ಗೌಡ ಪ್ರಶ್ನೆಗಳ ಮೇಲೆ ಪ್ರಶ್ನೆಗಳಾಗಿ ಹಾಕುತ್ತಾ ಅವಳ ಅಭಿವ್ಯಕ್ತಿಗೆ ಅವಕಾಶವನ್ನು ಕೊಡದೆ ಮತ್ತಷ್ಟು ಭಯಹೆಚ್ಚಿಸುವುದನ್ನು ನಾವು ಕಾಣಬಹುದು.

ಜೀತದಾಳುಗಳ ವ್ಯವಸ್ಥೆಯನ್ನು ಇವಾಗಲೂ ನಾವು ಕಾಣಬಹುದು. ಈ ಜೀತಪದ್ಧತಿಗೆ ಕಾರಣ ಬಡತನ, ಜೊತೆಗೆ ಅನೇಕ ಹೆಣ್ಣು ಮಕ್ಕಳು ಆ ಮಕ್ಕಳ ಮದುವೆ ಬಾಣಂತನ ಎಂದು ಅವನ ದುಡಿದ ಹಣವೆಲ್ಲಾ ವ್ಯಯವಾಗುವುದು ಜೊತೆಗೆ ಮದುವೆ ಮಾಡಿ ಕೊಟ್ಟ ಹೆಣ್ಣು ಮಕ್ಕಳು ಸರಿಯಾಗಿ ಬಾಳದೆ ಬಂದು ತಾಯಿಯ ಮನೆಯನ್ನು ಸೇರುವುದು ಸಹಜವಾಗಿತ್ತು. ಇಂತಹ ವ್ಯವಸ್ಥೆ ಅನೇಕ ಹಳ್ಳಿಗಳಲ್ಲಿ ಇರುವುದನ್ನು ನಾವು ಕಾಣಬಹುದು. ಹಳ್ಳಿಗಳಲ್ಲಿ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟು ವಿದ್ಯಾವಂತರನ್ನಾಗಿ ಮಾಡಿದರು. ತಮ್ಮ ಸಂಸಾರದ ಬಗ್ಗೆ ವಿವೇಚಿಸಿಕೊಳ್ಳುವ ಜ್ಞಾನ ಈ ಮಕ್ಕಳಲ್ಲಿ ಕಂಡುಬರುವುದಿಲ್ಲ. ಚಿಕ್ಕಂದಿನಿಂದಲೂ ತೊಂದರೆ ಕೊಡುವುದರ ಜೊತೆಗೆ ಮದುವೆ ಮಾಡಿದ ಮೇಲೆ ಮತ್ತಷ್ಟು ತೊಂದರೆ. ಆ ಕುಟುಂಬದ ತಂದೆ ಮೊದಲೆ ಬಡತನ ಬೇನೆಯಲ್ಲಿ ಬೇಯುತ್ತಿದ್ದ ಆತನಿಗೆ "ಗಾಯದ ಮೇಲೆ ಬರೇ ಹಾಕಿ ರೀತಿ" ಮತ್ತಷ್ಟು ಚಿಂತಾಜನಕವಾಗುತ್ತಾನೆ.

ಈ ಪರಿಶಿಷ್ಟ ವರ್ಗದವರು ಒಂದು ಬಾರಿ ಗೌಡರ ಮನೆಗೆ ಕೆಲಸಕ್ಕೆ ಸೇರಿದರೆ ಮುಗಿಯಿತು. ಅವರ ವಜ್ರಮುಷ್ಠಿಯಿಂದ ತಪ್ಪಿಸಿಕೊಂಡು ಹೊರಹೋಗುವುದೇ ಬಹಳ

ಕಷ್ಟ. ಜೀತದಾಳು ಕಷ್ಟ ಸುಖಗಳಿಗೆ ಸ್ಪಂದಿಸುವಂತಹ ಗೌಡ ಗುಣ ಇವರಲ್ಲಿ ಕಂಡುಬರುವುದಿಲ್ಲ. ಕೂಲಿಯಾಳು ಅಥವಾ ಜೀತದಾಳುಗಳನ್ನು ಮೃಗಗಳಿಗಿಂತಲೂ ಕೆಟ್ಟದ್ದಾಗಿ ನಡೆಸಿಕೊಳ್ಳುತ್ತಾರೆ. ಇದನ್ನು ನೋಡಿದಾಗ ನಮಗೆ ಅನ್ನಿಸುವುದು ಏನೆಂದರೆ ಹೊಟ್ಟೆ ತುಂಬಿದವರ ಮುಂದೆ ಕಷ್ಟಸುಖ ಹೇಳಿಕೊಂಡಂತೆ' ಇವರ ಸ್ಥಿತಿ. ಇಲ್ಲಿ ಬಡವನು ನಿಂತರೆ ಕಷ್ಟ ಕುಂತರೆ ಕಷ್ಟ ಎಂಬಂತೆ ಈತನ ಒಂದೊಂದು ಮಾತಿಗೂ ತಪ್ಪು ಕಂಡು ಹಿಡಿಯುವ ಗೌಡ ನಾನು ನಿನ್ನ ಮಗಳ ಕಳಿಸಲಿಲ್ಲ ಅಂತ ನನ್ನ ಮೇಲೆ, ನನ್ನ ಹೆಂಡತಿ ಮೇಲೆ ನಿನಗೆ ಸಿಟ್ಟಿದ್ರೆ, ನಿನ್ನ ಸಿಟ್ಟ ನಿನ್ನಲ್ಲೆ ಅದುಮಿ ಇಟ್ಕೋಬೇಕು. ಹೀಗೆ ನನ್ನ ಪಡಸಾಲೆ ಮೇಲೆ, ನನ್ನ ಮನೆ ಮೇಲೆಲ್ಲಾ ಅಲ್ಲ ನೀ ಸಿಟ್ಟು ತೋರೋದು ನನ್ನ ಮನೆರಾಗಿ ಬಿತ್ತೆ ಇಲ್ಲದಿದ್ದರೆ ಇಷ್ಟೊತ್ತಿಗೆ ನೀನು ಈ ಊರು ಬಿಡಬೇಕಾಗಿತ್ತು. ಉಂಡ ಮನೆಯ ಜಂತಿ ಎಣಿಸೋ ಪೈಕಿ ನಿಮ್ಮದು" ಎಂದು ಅವರ ಕುಲವನ್ನು ನಿಂದಿಸುವುದು ಕಂಡಬರುತ್ತದೆ. ಆದರೆ ಹಳ್ಳಿಗಳಲ್ಲಿ ಅದನ್ನು ಪ್ರತಿಭಟಿಸುವಂತಹ ವ್ಯಕ್ತಿಗಳು ಇನ್ನು ಹುಟ್ಟಿಲ್ಲ ಎಂದರೆ ತಪ್ಪಾಗಲಾರದು.

ಸಾಮಾನ್ಯವಾಗಿ ಹಳ್ಳಿಗಳ ಗೌಡರು ಉದ್ಧಾರವಾಗುತ್ತಿರುವುದೇ ಈ ಜೀತದಾಳುಗಳಿಂದ. ಅವರ ದೈಹಿಕ ಶ್ರಮದ ಫಲದಿಂದಾಗಿ ಇಂದು ಹಳ್ಳಿಗಳಲ್ಲಿ ದೊಡ್ಡ ಕುಳ ಎನಿಸಿಕೊಳ್ಳುತ್ತಿದ್ದಾರೆ. ಹೊಸ ಹೊಸ ಮನೆ ಗದ್ದೆ ಖರೀದಿಸಿ ಐಸರಾಮಿ ಜೀವನ ನಡೆಸುತ್ತಿದ್ದಾರೆ. ಆದರೆ ಗೌಡರು ಇವರ ಪರಿಶ್ರಮವನ್ನು ಪರಿಗಣಿಸದೆ ನಮಗೆ ದೇವರ ಕೃಪೆ ಮಾಡಿದ್ದಾರೆ ಅದರಿಂದಾಗಿ ನಾವು ಇಷ್ಟೊಂದು ಐಶ್ವರ್ಯ, ಸಂಪತ್ತು ಗಳಿಸಿರುವುದು ಎಂದು ದೇವರ ಹಬ್ಬವನ್ನು ಅದ್ದೂರಿಯಾಗಿ ನಡೆಸಬೇಕು ಎಂದು ಹರ್ಷಗೊಳ್ಳುತ್ತಾನೆ.

ಹಳ್ಳಿಗಳಲ್ಲಿ ದೊಡ್ಡವರು ಚಿಕ್ಕವರು ಎನ್ನದೆ ಜಾತಿ ಬೇಧ ಬೀಜವನ್ನು ಮಕ್ಕಳಲ್ಲಿ ಬಿತ್ತುವ ಪ್ರಯತ್ನಗಳು ನಡೆದು ಬಂದಿದೆ. 'ಮಕ್ಕಳ ಜಗಳಕ್ಕೆ ಒಕ್ಕಲು ಹೋಯಿತು' ಎಂಬಂತೆ ಹಿಂದುಳಿದ ಮಗು ಗೌಡನ ಮೊಮ್ಮಗನಿಗೆ ಉಗುದಿದ್ದು ದೊಡ್ಡ ವಿಷಯವಾಗಿ ಹಳ್ಳಿಯಲ್ಲಿ ಪ್ರಸರಿಸಿತು. ಹಿಂದುಳಿದ ವರ್ಗದ ಯಾವುದೇ ಉನ್ನತ ಹೆಸರನ್ನು ಇಟ್ಟುಕೊಳ್ಳುವ ಅವಕಾಶವೇ ಇರಲಿಲ್ಲ. ಅವರು ಕಾಳ, ಬೋಳ, ಕೆಂಚ ಎಂದು ಹೆಸರು ಇಟ್ಟುಕೊಳ್ಳಬೇಕಾಗಿತ್ತು. ಇಲ್ಲಿ 'ಮಾದೇಶ್' ಎಂಬ ಹೆಸರಿಟ್ಟಿದ್ದು ದೊಡ್ಡ ವಿಷಯವಾಗಿ ಪರಿಣಮಿಸಿತು. ಗೌಡರಿಗೆ ತನ್ನ ಮೊಮ್ಮಕ್ಕಳ ಬಗ್ಗೆ ಇವರು ಪ್ರೀತಿ. ಪರರ ಮಕ್ಕಳ ಮೇಲೆ ಮಾನವೀಯತೆಯನ್ನು ತೋರುವ ಔದಾರ್ಯವೇ ಇಲ್ಲ. ಗೌಡ ಮೊಮ್ಮಗನಿಗೆ ಉಲ್ಲೂರಯ್ಯನ ಮಗ ಉಗಿದುದು. ಒಬ್ಬರ ಕಿವಿಯಿಂದ ಮತ್ತೊಬ್ಬರಿಗೆ ಪ್ರಚೋದಿಸಲು ಚನ್ನೇಗೌಡರು ಪ್ರಯತ್ನಿಸುವುದು ನಾವು ಕಾಣಬಹುದು. ಇಲ್ಲಿ ಕಂಡುಬರುವ ಪ್ರಮುಖ ವಿಷಯವೆಂದರೆ ನಮ್ಮ ಜನರ ಒಳ್ಳೆಯ ಕೆಲಸಕ್ಕೆ ಸಹಾಯ

ಮಾಡಲು ಬರುವುದಿಲ್ಲ. ಆದರೆ ಯಾರಾದರೂ ತಪ್ಪು ಮಾಡಿ ಸಿಕ್ಕಿಹಾಕಿಕೊಂಡರೆ ಅವರನ್ನು ತುಳಿಯಲು ಬಹಳ ಜನರು ಬರುವರು. ಈ ರೀತಿಯ ತುಳಿತ ಪದ್ಧತಿ ಹಳ್ಳಿಗಳಲ್ಲಿ ಹೆಚ್ಚಾಗಿ ಬರುತ್ತದೆ.

ಮಕ್ಕಳ ವಿಷಯವನ್ನೇ ದೊಡ್ಡದು ಮಾಡಿ ಅದಕ್ಕೆ ದಂಡ ವಿಧಿಸುವ ವ್ಯವಸ್ಥೆ ಬಹಳ ಘೋರವಾಗಿ ಕಂಡುಬಂದರೂ, ಅದನ್ನು ಗಮನಿಸುವವರು ತಪ್ಪು ಎಂದು ತಿಳಿದು ಹೇಳುವ ಜನರಿಲ್ಲ. ಈ ಹಳ್ಳಿಯ ಗೌಡರು ಹೊಲಗೇರಿಯವರಿಂದಲೂ ಗೌರವವನ್ನು ಪಡೆಯಲು ಬಯಸುತ್ತಾರೆ. ಅವರು ತಮ್ಮಂತೆ ಮನುಷ್ಯ ಅವರನ್ನು ನಾವು ಮಾನವೀಯತೆಯಿಂದ ನೋಡಿಕೊಳ್ಳಬೇಕು ಎಂದು ಅಂದುಕೊಳ್ಳುವುದಿಲ್ಲ. ಅವರು ನೇರವಾಗಿ ಹೊಟೇಲ್‌ಗೆ ಹೋಗುವಂತಿಲ್ಲ. ಗೌಡರ ಜಗುಲಿ ಮೇಲೆ ಬಂದು ಕೂರುವಂತಿಲ್ಲ, ಹಾಗೇನಾದರೂ ಕುಳಿತರೆ ಅದನ್ನು ವಿರೋಧಿಸುವ ಮಂದಿ ಅನೇಕ ಹೊಲಗೇರಿಯ ಹೆಂಗಸರು ಫ್ಯಾಷನ್‌ಗೆ ಒಳಗಾದರೆ ಅದನ್ನು ಗೌಡರು ನಿಂದಿಸುವುದು ಅಪಹಾಸ್ಯ ಮಾಡುವುದನ್ನು ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

ಹಳ್ಳಿಗಳಲ್ಲಿ ಸಹಜವಾಗಿ ಕಂಡುಬರುವುದೆಂದರೆ, ಹೊಲಗೇರಿಯ ಜನರಿಗೆ ಯಾವುದೇ ರೀತಿಯ ಸ್ವಾತಂತ್ರ್ಯವನ್ನು ಕೊಡಬಾರದು. ನಮ್ಮನ್ನು ಬಿಟ್ಟು ಬೇರೆ ಎಲ್ಲೂ ಹೋಗಬಾರದು. ನಮ್ಮ ಸುತ್ತಮುತ್ತಲೇ ಸುಳಿಯಬೇಕು ಎಂಬ ಭಾವನೆ ಆದರೆ ಸ್ವಾತಂತ್ರ್ಯ ಪಡೆದ ಮೇಲೆ ಸರ್ಕಾರ ಅವರಿಗೆ ಅನೇಕ ಸೌಕರ್ಯಗಳನ್ನು ಮಾಡಿಕೊಟ್ಟಿದೆ. ಆದರೆ ಆ ಜನರಿಗೆ ತಲುಪುವುದಿಲ್ಲ. ಹೊಲಗೇರಿ ಜನರನ್ನು ಅವಾಚ್ಯ ಶಬ್ದಗಳಿಂದ ಬೈದರೆ ಅವರ ಅನ್‌ಟಚ್‌ಬಲ್ ಕೇಸ್ ಅಂತಹ ಈ ಜನಾಂಗವನ್ನು ಹೆದರಿಸುತ್ತಾರೆ ಎಂದು ಚನ್ನೇಗೌಡರಿಗೆ ಹೇಳುತ್ತಾನೆ. ಸರ್ಕಾರ ಎಂತಹ ಕಾನೂನು ತಂದರು ಗೌಡ ಹೆದರುವುದಿಲ್ಲ. ಏಕೆಂದರೆ ಆರ್ಥಿಕವಾಗಿ ಹಿಂದುಳಿದ ಇವರು ಗೌಡರನ್ನು ಎದುರಿಸುವ ಶಕ್ತಿಯಿಲ್ಲ. "ಬಡವನ ಕೋಪ ದವಡೆಗೆ ಮೂಲ" ಎಂಬಂತೆ ಇರಬೇಕು.

ಹಳ್ಳಿಗಳಲ್ಲಿ ನಡೆಯುವ ಊರ ಹಬ್ಬಕ್ಕೆ ಎಲ್ಲಾ ಸೇರಿ ಈ ಹಬ್ಬ ಆಚರಿಸಬೇಕು. ಇಲ್ಲಿಯ ಪೂಜಾರಿಯು ಹಿಂದುಳಿದ ವರ್ಗದವನಾದ್ದರಿಂದ ಸಂಪ್ರದಾಯದಂತೆ ಈ ಪದ್ಧತಿಯನ್ನು ತಿರಸ್ಕರಿಸುವಂತಿಲ್ಲ. ಅನೇಕ ಭಕ್ತಾದಿಗಳು ಇಲ್ಲಿಗೆ ಬಂದು ಗುರುವಿನಿಂದ/ಪೂಜಾರಯ್ಯನಿಂದ ಉಗಿಸಿಕೊಂಡು ಹೋದರೆ ಅವರಿಗೆ ಒಳ್ಳೆಯದಾಗುತ್ತದೆ ಎಂಬ ಆತ್ಮವಿಶ್ವಾಸ. ಈ ಹಬ್ಬ ಹರಿದಿನಗಳಲ್ಲಿ ಹೊಲಗೇರಿಯ ಮಂದಿ ಕುಣಿದು ಕುಪ್ಪಳಿಸುವುದು ಹೆಚ್ಚು. ಇಲ್ಲಿ ಪೂಜಾರಯು ಬಾಯಿಗೆ ನೀರು ತುಂಬಿಕೊಂಡು ಉಗಿದಾಗ ಅವರು ಅಂದುಕೊಂಡಿದ್ದು ನೆರವೇರುತ್ತದೆ ಎಂಬ ನಂಬಿಕೆ. ಈ ರೀತಿ ಮಾಡದಿದ್ದರೆ ಊರಿಗೆ ಕೇಡುಗಾಲ, ವಾಂತಿ, ಭೇದಿ ಆಗಿ ಜನರು ಸಾಯುತ್ತಾರೆ ಎಂಬ ನಂಬಿಕೆ ಹೆಚ್ಚಾಗಿ ಹಳ್ಳಿಗಾಡಿನ ಜನರಲ್ಲಿ ಕಂಡುಬರುತ್ತದೆ.

ತನ್ನ ಮೊಮ್ಮಗನಿಗೆ ಹೊಲಗೇರಿಯ ಉಲ್ಲೂರ ಮಗ ಮಾದೇಶ ರಾಜನಿಗೆ ಉಗಿದಾ ಎಂದು ದೊಡ್ಡ ಪಂಚಾಯಿತಿ ನಡೆಸುವ ಆ ದೊಡ್ಡ ಮನುಷ್ಯರು, ಪೂಜಾರಯ್ಯ ಹೊಲಗೇರಿಯಾದರು ಅವರಿಂದ ಉಗಿಸಿಕೊಳ್ಳುವುದು ಮಹಾಪ್ರಸಾದ ಎಂಬಂತೆ ಅವರ ಮುಂದೆ ಕುಳಿತು ಚೆನ್ನಾಗಿ ಉಗಿಯಿರಿ ಎಂದು ಹೇಳುತ್ತಿರುವ ಮಾತನ್ನು ಗಮನಿಸಿದಾಗ ಲಜ್ಜಸ್ವಾದ ಎನಿಸುವುದರಲ್ಲಿ ಯಾವ ತಪ್ಪಿಲ್ಲ. ಇಲ್ಲಿ ಗೌಡರು ಉಗಿಸಿಕೊಳ್ಳುತ್ತಿರುವುದು ಮಾದ ನೋಡುವುದು ಕುತೂಹಲಕರವಾಗಿ ಕಂಡು ಬಂತು. ಆ ಮುಗ್ಧ ಮನಸ್ಸಿನಲ್ಲಿ ಏನೇನೋ ಆಲೋಚನೆಗಳು ಮೂಡಿರಬಹುದು. ಸಣ್ಣವನಾದ ನನ್ನ ಬಾಯಿಯಿಂದ ಉಗಿದಾಗ ಬಹಿಷ್ಕರಿಸಿದ ಮಂದಿ, ಪೂಜಾರಯ್ಯನ ಬಾಯಿಯಿಂದ ಉಗಿಸಿಕೊಳ್ಳುವುದು ಎಂತಹ ನೀಚ ಕೃತ್ಯ ಎನಿಸಿರಬಹುದು ಆ ಮಗುವಿಗೆ. ಆದರೆ ಜಾತಿ ಮೇಲ್ ಕೀಳ್ ಎಂಬುವುದು ದೊಡ್ಡವರಿಗೆ ಮಾತ್ರ. ಆದರೆ ಮಕ್ಕಳಲ್ಲಿ ಈ ರೀತಿಯ ಭಾವನೆಗಳು ಹುಟ್ಟುವುದಿಲ್ಲ. ಆದರೆ ದೊಡ್ಡವರೆಂಬ ದಡ್ಡ ಮಂದಿ ಮಕ್ಕಳಲ್ಲಿ ಈ ರೀತಿಯ ಭಾವನೆ ವಿಷ ಬೀಜವನ್ನು ಬಿತ್ತುತ್ತಾರೆ.

ಹಳ್ಳಿಗಳಲ್ಲಿ ಸಾಮಾನ್ಯ ಬಡವರು ಹೆಚ್ಚಾಗಿ ಕಂಡುಬರುತ್ತದೆ. ಈ ಬಡವರ ಜಾತಿಯಲ್ಲಿ ಕುಡಿತಕ್ಕೆ ಒಳಗಾಗಿರುವ ಮಂದಿಯೇ ಹೆಚ್ಚು ಹಾಳಾಗಿರುವುದನ್ನು ನಾವು ಕಾಣಬಹುದು. ಬೆಳಿಗ್ಗೆಯಿಂದ ಸಂಜೆಯುವರೆಗೂ ದುಡಿದು ತಂದ ಎಲ್ಲಾ ಹಣವನ್ನು ಕುಡಿದು ಹಾಳು ಮಾಡುವ ಮಂದಿ ಹೆಚ್ಚಾಗಿ ಕಂಡುಬರುತ್ತಾರೆ. ಈ ಕುಡಿತಕ್ಕೆ ದಾಸರಾದ ಮಂದಿ ತಮ್ಮ ಮನೆ, ಮಠ, ಆಸ್ತಿ-ಪಾಸ್ತಿಯನ್ನು ಕಳೆದುಕೊಂಡು ತಮ್ಮ ಸಂಸಾರವನ್ನು ನಡುಬೀದಿಯಲ್ಲಿ ಬಿಡುವ ಪ್ರಸಂಗವನ್ನು ನಾನು ಕಾಣಬಹುದು. ಮತ್ತೆ ಕೆಲವರು ನಮಗೂ ನಮ್ಮ ಸಂಸಾರಕ್ಕೂ ಯಾವುದೇ ಸಂಬಂಧವೇ ಇಲ್ಲ ಎಂಬಂತೆ ಕುಡಿದು ಬೀದಿಯಲ್ಲಿ ಬಿದ್ದು ಹಾಳಾಗುತ್ತಿರುವುದನ್ನು ನಾವು ಕಾಣಬಹುದು.

**"ಕಲ್ಯಾಣಿ"** ಕತೆಯಲ್ಲಿ ರಂಗನ ಹೆಂಡತಿ ಬಡ ಕುಟುಂಬದಲ್ಲಿ ಹುಟ್ಟಿದ ಈಕೆಗೆ ತನ್ನ ತಂದೆ ತಾಯಿಗಳು ಬುದ್ಧಿ ಹೇಳಿ ಮದುವೆ ಮಾಡುವ ಪ್ರಸಂಗವನ್ನು ನಾವು ನೋಡಬಹುದು. ಹಳ್ಳಿಯ ಮುಗ್ಧ ಹೆಣ್ಣಿನ ಮನಸ್ಸಿಗೆ ಇಲ್ಲಸಲ್ಲದ ಸುಳ್ಳಾಡುವುದು ಅವನಿಗೆ ಅಪ್ಪ-ಅಮ್ಮ, ಅಣ್ಣ-ತಮ್ಮ, ಸಾದಿನಿಯರು ಯಾರು ಇಲ್ಲ ಆ ಮನೆಯಲ್ಲಿ ನೀನೆ ರಾಣಿ ಎಂದು ಹೇಳಿ ರಂಗಣ್ಣನಿಗೆ ಮದುವೆ ಮಾಡಿದ್ದು. ಈ ರೀತಿ ಮಾಡುವುದರಿಂದ ಎನೆಲ್ಲಾ ದುಷ್ಪರಿಣಾಮ ಉಂಟಾಗುತ್ತದೆ ಎಂಬುದನ್ನು ಲೆಕ್ಕಿಸದ ಜನರು ಮುಗ್ಧ ಹೆಣ್ಣನ್ನು ಹಾಳು ಬಾವಿಯಲ್ಲಿ ನೂಕುವುದು. ಅಲ್ಲಿ ಅವಳು ಪಡುವ ಕಷ್ಟಗಳನ್ನು ಬರಿ ಮಾತಿನಲ್ಲಿ ಹೇಳಲು ಸಾಧ್ಯವಾಗುವುದಿಲ್ಲ.

ಯಾವುದೇ ಹೆಣ್ಣುಮಗಳನ್ನು ಮದುವೆ ಮಾಡಿಕೊಡಬೇಕಾದರೂ ಕೂಡ 'ಪ್ರತ್ಯಕ್ಷವಾಗಿ ಕಂಡರೂ ಪ್ರಮಾಣಿಸಿ ನೋಡಬೇಕು' ಎಂಬ ಮಾತು ತುಂಬ

ಸಮಂಜಸವಾಗಿ ಒಪ್ಪಿಕೊಳ್ಳುತ್ತದೆ. ಈ ಹಳ್ಳಿಯ ಯುವಕರು ಕುಡಿತ ಜೊತೆಗೆ ಇಸ್ಪೀಟು ಈ ರೀತಿಯ ದುಶ್ಚಟಗಳು ಇದ್ದರೂ ನಮ್ಮ ಹಳ್ಳಿಗಾಡಿನ ಹೆಣ್ಣುಮಕ್ಕಳು ದಯಾವಂತರಾಗಿ ಕಂಡುಬರುತ್ತಾರೆ. ಇವೆರಡೆ ಚಟವಲ್ಲವೇ ಪರವಾಗಿಲ್ಲ ಬಿಡು ಬೇರೆಯ ಗಂಡಸರು ಹೆಂಡತಿ ಇದ್ದರೂ ಪರಸ್ತ್ರೀಯ ಸಹವಾಸ ಮಾಡುತ್ತಾರೆ. ನನ್ನ ಗಂಡ ಎಷ್ಟು ಒಳ್ಳೆಯವನು ಎಂದು ಸಮಜಾಯಿಷಿಕೊಳ್ಳುವ ಹೆಣ್ಣುಮಕ್ಕಳೆ ಹೆಚ್ಚು ನಮ್ಮ ಹಳ್ಳಿಗಳಲ್ಲಿ ಈ ರೀತಿಯ ಕೆಟ್ಟ ಚಟಗಳಿದ್ದರೂ ಅದನ್ನು ಬಿಡಿಸುವಂತೆ ದೇವರಿಗೆ ಹರಕೆ ಹೊತ್ತಿಕೊಳ್ಳುವುದನ್ನು ನಾವು ಕಾಣಬಹುದು. ಇಂತಹ ಗುಣ, ಕ್ಷಮಾಯಧರಿತ್ರಿಯರು ನಗರ ಪ್ರದೇಶದಲ್ಲಿ ಸಿಗಲಾರರು. ಕುಡಿತಕ್ಕೆ ಒಳಗಾದವರಿಗೆ ಮನೆ–ಮಠ ಹೆಂಡತಿ ಮಕ್ಕಳು ಬೇಕಾಗುವುದಿಲ್ಲ. ಅವರ ಉದ್ಯೋಗ ವ್ಯವಸಾಯವಾಗಿದೆ. ಆದರೆ ಇತ್ತೀಚೆಗೆ ಕುಡಿತವೇ ಅವರ ಉದ್ಯೋಗವಾಗುತ್ತಿದೆ. ಕುಡಿದು ಇಸ್ಪೀಟು ಆಡಿ ಸಾಲ ಮಾಡುವುದು. ಸಾಲ ಹೆಚ್ಚಾಗಿ ಊರುಬಿಟ್ಟು ಹೋಗುವುದು. ಹಳೆಯದಾದ ಮೇಲೆ ಮತ್ತೆ ಬಂದು ಎಲ್ಲಾ ಆಟ ಮರೆತಂತೇ ಇರುವುದು. ಮತ್ತೆ ಹಳೆಚಟಗಳನ್ನು ಮುಂದುವರಿಸುವುದು "ಕಲಿತಿರುವುದನ್ನು ಬಿಡು ಎಂದರೆ ಕಟ್ಟಿಕೊಂಡ ಗಂಡನನ್ನು ಬೇಕಾದರೆ ಬಿಡಿತ್ತೀನಿ ಕಲಿತಿರುವನ್ನು ಮಾತ್ರ ಬಿಡುವುದಿಲ್ಲ" ಎಂಬಂತೆ ಹೆಂಡ ಕುಡಿದ ಬಾಯಿಗೆ ಸತ್ಯ ಸುಳ್ಳುಗಳಿಗೆ ವ್ಯತ್ಯಾಸವೇ ಇಲ್ಲ. ಇವರುಗಳು ಮಾಡಿದ ಸಾಲಕ್ಕೆ ಹೆಂಡತಿ ತಲೆ ಒಡ್ಡಬೇಕಾಗುತ್ತದೆ. ಕೊನೆಗೆ ಆಕೆಯ ಗಂಡನು ಒಂದು ಒಂದು ಕುಂಟೆ ಎಂದುಕೊಂಡು ತನ್ನ ಜಮೀನನ್ನು ಮಾರುವ ಪರಿಸ್ಥಿತಿ ಒದಗುತ್ತದೆ. ಕುಡಿತ ತನ್ನ ಸಂಸಾರವನ್ನು ಬೀದಿಗೆ ತಂದು ನಿಲ್ಲಿಸುತ್ತದೆ. ಇಂತಹ ಕೆಟ್ಟಚಟಗಳಿಂದಾಗಿ ಇಂದಿಗೂ ಕೂಡ ಅನೇಕ ಹಳ್ಳಿಗಳಲ್ಲಿ ಸಂಸಾರ ಸರ್ವನಾಶವಾಗಿರುವುದನ್ನು ಕಾಣಬಹುದು.

ಕುಡಿತದಿಂದ ಹೊಲ ಮನೆ ಹಸು–ಕರು–ಕುರಿ ಎಲ್ಲವನ್ನು ಮಾರಿಕೊಂಡಾಗ, ಹಾಗೆಯೇ ಕೂರುವುದು ತಮ್ಮ ಹಳ್ಳಿ ಹೆಂಗಳೆಯರ ಮನಸ್ಸೆಲ್ಲಾ ಅವಳು ತನ್ನ ಕರುಳ ಕುಡಿಯನ್ನು ಸಾಕುವುದಕ್ಕಾಗಿ ಕೂಲಿಮಾಡಿ ಜೀವನ ಸಾಗಿಸಬೇಕಾದಿತು. ತಾನು ಕೂಲಿಮಾಡಿ ತಂದ ಕೂಳನ್ನು ತಿಂದುಕೊಂಡು ಕಾಲಕಳೆಯುವ ಗಂಡಸರು ಬೇಕಾದಷ್ಟು ಮಂದಿಯನ್ನು ನಾವು ಕಾಣಬಹುದು. ಇವರಿಂದ ಸಮಾಜಕ್ಕೂ ಸಂಸಾರಕ್ಕೂ ಏನೂ ಉಪಯೋಗವಿಲ್ಲದೆ ಇಂತಹ ಗಂಡಂದಿರನ್ನು ಕಟ್ಟಿಕೊಂಡ ತಪ್ಪಿಗೆ ತಮ್ಮ ಜೀವನವನ್ನು ತೇಯುತ್ತಾರೆ. ಈ ಪರಿಸ್ಥಿತಿ ಏನಾದರೂ ನಗರ ಪ್ರದೇಶದಲ್ಲಿ ಇದ್ದಿದರೇ ಗಂಡನನ್ನು ಬಿಟ್ಟು ತಾವೇ ಸ್ವತಂತ್ರವಾಗಿ ಜೀವಿಸುತ್ತಿದ್ದರು. ಆದರೆ ನಮ್ಮ ಹಳ್ಳಿಯ ಹೆಂಗಳೆಯರಿಗೆ ಆ ಕೆಲಸವನ್ನು ಮಾಡಲು ಮನಸಾಕ್ಷಿ ಒಪ್ಪುವುದಿಲ್ಲ. ಗಂಡನೆನ್ನುವನು ಕುಡಿದು ಮೂಲೆಯಲ್ಲಿ ಬಿದ್ದಿದ್ದರೂ ಗಂಡ ಇರಬೇಕು ಎಂಬ ನಂಬಿಕೆ ಹಳ್ಳಿಗಾಡಿನ ಮಣ್ಣಿನಲ್ಲೇ ಬೆರೆತುಬಂದಿದೆ.

ತಾನು ಗಂಡನಿಂದ ಸುಖವನೇ ಕಾಣದೆ ಇದ್ದರೂ ತಂದೆಯ ಮನೆಗೆ ಹೋಗದೆ ತನ್ನ ಗಂಡನ ಜೊತೆ ಇರಬೇಕು. ಅವನ ಮನೆಯಲ್ಲಿ ಸಾಯಬೇಕು ಎಂದು ದೃಢನಿರ್ಧಾರಮಾಡಿ, ಅವಳ ತಾಳ್ಮೆಯು ಮಿತಿಮೀರಿದಾಗ ತೆಗೆದುಕೊಳ್ಳುವ ತೀರ್ಮಾನ ಎಂತವರ ಮನಸ್ಸನ್ನು ಕರಗಿಸುವಂತಹದಾಗಿರುತ್ತದೆ. ಕುಡಿತ ಇಸ್ಪೀಟೂ ಚಟಕ್ಕೆ ಒಳಗಾದವರಿಂದ ತನ್ನ ಮನೆ ಮಕ್ಕಳ, ಹೆಂಡತಿಯನ್ನು ಕಳೆದುಕೊಳ್ಳುವ ಎಷ್ಟೊಂದು ಕುಟುಂಬಗಳನ್ನು ನಾವು ಹಳ್ಳಿಗಳಲ್ಲಿ ಕಾಣಬಹುದು.

ಕುಡಿತ ಇಸ್ಪೀಟು, ಕಳ್ಳತನ ಇವುಗಳು ಸಮಾಜವನ್ನೇ ಹಾಳುಮಾಡುವ ಸಾಂಕ್ರಾಮಿಕ ರೋಗ ಎಂದರೆ ತಪ್ಪಾಗಲಾರದು. ಈ ಒಂದು ಚಟಕ್ಕೆ ಯುವಕರಿಂದ ಹಿಡಿದು ಮುದುಕರವರೆಗೂ ಇದರ ದಾಸರಾಗಿದ್ದಾರೆ. ತಾವು ಸಂಪಾದನೆ ಮಾಡಿದ ಹಣವನ್ನೆಲ್ಲಾ ಇದಕ್ಕೆ ವ್ಯಯಮಾಡುತ್ತಾರೆ. ಇವರನ್ನು ನಂಬಿಕೊಂಡ ಕುಟುಂಬ-ವರ್ಗದವರು ಹೊಟ್ಟೆಗೆ ತಣ್ಣೀರ ಬಟ್ಟೆಹಾಕಿಕೊಂಡು ಬಾಳಬೇಕು. ನಗರಪ್ರದೇಶ ಈ ಚಟಕ್ಕೆ ಒಳಗಾಗಿದ್ದರೂ ಹಳ್ಳಿಗಾಡಿನಷ್ಟು ಮನೆಯ ಜವಾಬ್ದಾರಿಯನ್ನು ಬಿಟ್ಟು ಕುಡಿದು ಬಿದ್ದು ಇರುವ ಹೊಲ ಮನೆ ಮಠಗಳನ್ನು ಮಾರಿಕೊಂಡಿರುವುದು ಹೆಚ್ಚಾಗಿ ಕಂಡುಬರುವುದಿಲ್ಲ. ಈ ಕತೆಗಳ ಮೂಲಕ ಕರೀಗೌಡರು ನಮ್ಮ ಹಳ್ಳಿಗಳನ್ನು ಉದ್ಧಾರಮಾಡುವುದು ಪ್ರತಿಯೊಬ್ಬ ನಾಗರಿಕನ ಕರ್ತವ್ಯ. ಈ ಕುಡಿತ ಚಟಕ್ಕೆ ಒಳಗಾಗದೇ ಹಳ್ಳಿಗಳ ಉದ್ಧಾರ ಮಾಡುವುದರ ಕಡೆ ಗಮನಕೊಟ್ಟು ಕುಟುಂಬನವನ್ನು ಸಂತೋಷದಿಂದ ಇರುವಂತೆ ನೋಡಿಕೊಳ್ಳಿ ಎಂದು ಎಚ್ಚರಿಕೆಯ ಮಾತುಗಳನ್ನು ಈ ಕತೆಗಳ ಮೂಲಕ ಹೇಳಬಯಸಿದ್ದಾರೆ.

ಹಳ್ಳಿಗಳಲ್ಲಿ ಯಾವುದೇ ಕುಟುಂಬ ಹಾಳಾದರೆ ಆ ಹೆಣ್ಣನ್ನು ತನ್ನ ವಶಪಡಿಸಕೊಳ್ಳಲು ಪ್ರಯತ್ನಿಸುವ ಜನರಿರುವ ಈ ಪ್ರಪಂಚದಲ್ಲಿ ಮಾನವೀಯ ಗುಣ ಮರೆಯುವ ವ್ಯಕ್ತಿಗಳು ಈ ಹಳ್ಳಿಗಾಡಿನಲ್ಲಿ ಇದ್ದಾರೆ ಎಂಬುದು ಹೆಮ್ಮೆಯ ವಿಷಯ. ಇಲ್ಲಿ ಮಾನವೀಯ ಗುಣ ಮೆರೆದಿರುವ ಗೌಡರು ಕುಡುಕನ ಹೆಂಡತಿ ಬಾವಿಗೆ ಬೀಳಲು ಹೋದ ಸಂದರ್ಭದಲ್ಲಿ ಅವಳನ್ನು ತಡೆದು ಅವಳಲ್ಲಿ ವಿವೇಕಜ್ಞಾನ ತುಂಬಿಸಿ ಅವಳಿಗೆ ಬದುಕುವ ಜ್ಞಾನ ತುಂಬಿಸಿ ಮಕ್ಕಳ ಭವಿಷ್ಯಕ್ಕಾಗಿ, ಜೀವನ ನಡೆಸಲು ಬೇಕಾದ ದಾರಿಯನ್ನು ತೋರಿಸಿಕೊಟ್ಟಂತಹ ಮಹಾನ್ ವ್ಯಕ್ತಿ.

ಈಗ ಹಳ್ಳಿಗಾಡಿನ ಪ್ರದೇಶದಲ್ಲಿ ತಾತಂದಿರ ಕಾಲದಲ್ಲಿ ಇದ್ದ ಒಂದು ಸೋದರ ಬಾಂಧವ್ಯ ಈಗ ಮರೆಯಾಗಿದೆ. ಒಂದು ಕುಟುಂಬದಲ್ಲಿ ಇರಬೇಕಾದ ಪ್ರೀತಿ ವಾತ್ಸಲ್ಯ ಕಡಿಮೆಯಾಗಿ ಹೋಗಿದ್ದ ಅಣ್ಣತಮ್ಮಂದಿರ ಬಾಂಧವ್ಯ ವ್ಯಾಪಾರವಾಗಿ ಪರಿಣಮಿಸಿದೆ. ಅದಕ್ಕೆ ಸಾಕ್ಷಿ ಎಂಬಂತೆ 'ಅವಮಾನ' ಕತೆಯಲ್ಲಿ ಕಂಡುಬರುತ್ತದೆ. ತಿಥಿಯನ್ನು

ಮಾಡುವುದರ ಬಗೆಗೆ ತನ್ನ ಭಾವಮೈದುನರನ್ನು ಕೇಳುವಾಗ ಕರಿಸಿದ್ದೇಗೌಡರು 'ಕುರಿಬಾಡು ಅಂದರೆ ಕರೆಯದೆ ಇದ್ದರೂ ಹೋಗ್ತಾನೆ ಸಿದ್ದ' ಎಂಬ ಮಾತು ಹಳ್ಳಿಯವರಿಗೆಲ್ಲ ತಿಳಿದಿತು. ಅದಕ್ಕೆ ಮಾಂಸದೂಟ ಮಾಡಲು ನಿರ್ಧರಿಸಿದರು. ಇದರಲ್ಲಿ ಕರಿಸಿದ್ದೇಗೌಡನ ಮಕ್ಕಳನ್ನು ಕೇಳುವುದು ಸಹಜವಾಗಿರುತ್ತದೆ. ಕುಂಟಪ್ಪನ ಹೋತವನ್ನು ಕೊಯ್ಯುವಂತೆ ತೀರ್ಮಾನಿಸಿದರು. ಅದಕ್ಕೂ ಅಂದರೆ ಹೋತಕ್ಕೂ ದುಡ್ಡು ಕೊಡಬೇಕಾಗಿತ್ತು. ದುಡ್ಡು ಕೊಡದೆ ಮೋಸಮಾಡುತ್ತಾರೆ ಎಂಬ ವಿಷಯ ತಿಳಿದ ತಕ್ಷಣ, ಪೊಲೀಸರಿಗೆ ದೂರು ನೀಡುವುದು ಕಂಡುಬರುತ್ತದೆ.

ಇಲ್ಲಿ ಅಣ್ಣತಮ್ಮಂದಿರಲ್ಲಿ ತೀರ್ಮಾನವಾಗಬೇಕೆಂದು ಪೊಲೀಸ್ ಸ್ಟೇಷನ್ ದೂರು ಕೊಡುತ್ತಾರೆ. "ಆಡಿಕೊಳ್ಳುವ ಜನರಿಗೆ ಹಾಸಿಕೊಟ್ಟಂತೆ ಆಯ್ತು' ಎಂಬಂತೆ ತನ್ನ ಸಹೋದರನೇ ಬಂಧಿಸುವಂತೆ ದೂರು ನೀಡುತ್ತಾನೆ. ಆದರೆ ಲಂಚದ ಮುಂದೆ ಏನು ನಡೆಯುವುದಿಲ್ಲ. ಮೊದಲೇ ಕುಂಟನಾಗಿರುವ ವ್ಯಕ್ತಿಯಿಂದ ಐವತ್ತು ರೂಪಾಯಿ ಪಡೆದ ಲಂಚಕೋರರು. ಹಣ ಪಡೆದ ತಕ್ಷಣ ಕುಂಟಪ್ಪನ ಸಹೋದರರನ್ನು ಬಂಧಿಸಲು ಮುಂದಾಗುವರು. ಬಂಧಿಸಲು ಬಂದ ಪೊಲೀಸ್ ಇಲ್ಲಿ ಬಂಧುಗಳ ರೀತಿಯಲ್ಲಿ ಉಪಚರಿಸಿಕೊಳ್ಳುತ್ತಾನೆ. ಈ ಮೀರಾಸಾದಕರ್ 'ಆರು ಕೊಟ್ಟರೆ ಅತ್ತೆ ಕಡೆ ಮೂರು ಕೊಟ್ಟರೆ ಸೊಸೆ ಕಡೆ' ಎಂಬಂತೆ ಬಿಟ್ಟಿ ಊಟವನ್ನು ಬಾರಿಸುತ್ತ ಕುಳಿತರು.

ಆದರೆ ಈ ನಿಜಸ್ಥಿತಿಯನ್ನು ಅರಿಯದ ಕುಂಟಣ್ಣನಂತಹ ಹಳ್ಳಿ ಮುಗ್ಧರು ತಮ್ಮ ಮನೆಯ ಮರ್ಯಾದೆಯ ಬೀದಿಯಲ್ಲಿ ಹರಾಜು ಹಾಕಲು ಪ್ರಯತ್ನಿಸುತ್ತಾರೆ ಇವರು ಕೋಪದ ಕೈಗೆ ಬುದ್ಧಿ ಕೊಟ್ಟು ಅನುಭವಿಸುವ ಕಷ್ಟ ಹೇಳತೀರದು. ಇಲ್ಲಿ ಪೊಲೀಸ್ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವುದಕ್ಕಾಗಿ ರಾಜಣ್ಣನನ್ನು ಚೆನ್ನಾಗಿ ಹೊಡೆಯುತ್ತಾರೆ. ಕುಂಟಪ್ಪ ತನ್ನ ತಮ್ಮನಿಗೆ ಹೊಡೆಸಿದ್ದು ಬಹಳ ಸಂತೋಷಗೊಳ್ಳುತ್ತಾನೆ. ಆದರೆ ಆರಂಭದಲ್ಲಿ ಆದ ಸಂತೋಷ ಕ್ರಮೇಣ ಕಡಿಮೆಯಾಗುತ್ತದೆ. ಆತನನ್ನು ಬಿಡುವಂತೆ ಐವತ್ತು ರೂಪಾಯಿ ಲಂಚವನ್ನು ಕೊಟ್ಟ.

ಹಳ್ಳಿಯ ಮಂದಿ ಸಮಯಪ್ರಜ್ಞೆಯಿಲ್ಲದವರು ತಮ್ಮತಮ್ಮಲ್ಲಿ ಚರ್ಚಿಸಿ ತೀರ್ಮಾನಕ್ಕೆ ಬರುವ ವಿಚಾರವನ್ನು ಸ್ಟೇಷನ್‌ವರೆಗೂ ಹೋಗಿ ತಮ್ಮ ಊರಿನಲ್ಲಿ ನೆಂಟರಿಷ್ಟರ ಮುಂದೆ ಅವಮಾನಕ್ಕೆ ಈಡಾದರು. ಆ ಕುಟುಂಬದ ಬಗ್ಗೆ ಗೌರವವನ್ನು ಹಾಳು ಮಾಡಿಕೊಂಡು ಜೊತೆಗೆ ಪೊಲೀಸ್‌ರಿಗೆ ದುಡ್ಡು ತಿನ್ನಿಸುವುದು ಈ ರೀತಿ ರಾದ್ಧಾಂತಗಳು ನಡೆಯುತ್ತಲೇ ಇರುತ್ತವೆ. ಅಡಿಕೆಗೆ ಹೋದ ಮಾನ ಆನೆಕೊಟ್ಟರು ಬರುವುದಿಲ್ಲ ಎಂಬಂತೆ ಮನೆಯ ಜಗಳವನ್ನು ಬೀದಿ ತಾದು ಹಾಳಾಗುವಂತ

ಹಳ್ಳಿಗಾಡಿನ ಜನರು ಹಿಂದೆ ಉಳಿಯುವರೆ ಹೊರತು ಮುಂದೆ ಬರಲು ಸಾಧ್ಯವಾಗುವುದಿಲ್ಲ. ತಾವು ಅಥವಾ ಕುಟುಂಬದವ ತಿಂದರೆ ಹಾಳಾಗುತ್ತದೆ ಎಂದು ಬೇರೆಯವರಿಗೆ ತಿನ್ನಿಸುವುದೇ ಹೆಚ್ಚು. ಹೀಗೆ ತಮ್ಮ ಮರ್ಯಾದೆಯನ್ನು ತಾವೇ ಹಾಳು ಮಾಡಿಕೊಳ್ಳುವುದು ಅಧಿಕವಾಗಿ ನಮ್ಮ ಜನರು ಹಿಂದುಳಿಯುತ್ತಾರೆ.

"ಹುಟ್ಟುವಾಗ ಅಣ್ಣ ತಮ್ಮ ಬೆಳೆಯುತ್ತಾ ದಾಯಾದಿಗಳು" ಎಂಬ ಮಾತು ಎಷ್ಟರ ಮಟ್ಟಿಗೆ ನಿಜವಾಗುತ್ತದೆ ಎಂಬುವುದನ್ನು ಹಳ್ಳಿಗಳಲ್ಲಿ ಕಾಣಬಹುದು. ಒಂದು ಕುಟುಂಬದಲ್ಲಿ ಹೊಂದಾಣಿಕೆ ಇರುವುದಿಲ್ಲ. ಅಣ್ಣ ತಮ್ಮನನ್ನು ನಾಶ ಮಾಡಲು ತಮ್ಮ ಅಣ್ಣನನ್ನು ನಾಶಮಾಡಲು ಹೊಂಚುಹಾಕುತ್ತಾ ಶತ್ರುತ್ವ ಭಾವನೆಯನ್ನು ಬೆಳೆಸಿಕೊಳ್ಳುತ್ತ ಬರುತ್ತಾರೆ. ಯಾವುದೇ ಒಬ್ಬ ವ್ಯಕ್ತಿ ಬದುಕುತ್ತಿದ್ದಾನೆ ಎಂದು ಕಂಡರೆ ಅವನ ಕಾಲು ಎಳೆಯುವ ಕೆಲಸ ಸಾಮಾನ್ಯವಾಗಿ ಹಳ್ಳಿಗಳಲ್ಲಿ ನಡೆಯುತ್ತದೆ. ಹೀಗಿರುವಾಗ ಹಳ್ಳಿಗಳು ಉದ್ಧಾರವಾಗಲೂ ಹೇಗೆ ಸಾಧ್ಯ. 'ಸಂಸಾರದ ಗುಟ್ಟು ವ್ಯಾದಿ ರಟ್ಟು' ಎಂಬಂತೆ ತಮ್ಮ ತಮ್ಮ ಮರ್ಯಾದೆಯನ್ನು ತಾವೇ ಕಳೆದುಕೊಂಡು ಸ್ಟೇಷನ್, ಕೋರ್ಟ್ ಎಂಬ ನಮ್ಮ ನಿರ್ಗತಿಕ ಸ್ಥಿತಿಗೆ ಬರುತ್ತಾರೆ.

ಇತ್ತೀಚೆಗೂ ಹಳ್ಳಿಗಳಲ್ಲಿ ನಾವು ಕಾಣುವುದು ಬಡತನ. ಈ ಬಡತನದಿಂದ ಜನರು ಯಾವುದೇ ಕೆಲಸ ಮಾಡಲು ಸಿದ್ಧರಿರುತ್ತಾರೆ. ತಂದೆ ವಯಸ್ಸಿನಂತವನಿಗೆ ಚಿಕ್ಕ ವಯಸ್ಸಿನ ಹೆಣ್ಣು ಕೊಟ್ಟು ಮದುವೆ ಮಾಡುವುದು, ಅವಳ ಸೌಂದರ್ಯ ಯೌವನದಲ್ಲಿ ಸವಿದ ಮುದಿ ವಯಸ್ಸಿನ ಗಂಡ ತನ್ನ ಮೊದಲನೆಯ ಹೆಂಡತಿಯ ಮನೆಗೆ ಬಂದು ಹೋಗಿ ಮಾಡಿ ಒಂದೇ ಮನೆಯಲ್ಲಿ ಬರುವಂತೆ ಬಯಸುತ್ತಾನೆ. ಅದಕ್ಕೆ ಒಪ್ಪದಿದ್ದಾಗ ಮಕ್ಕಳ ತಲೆಯ ಮೇಲೆ ಪಾಲು ಹಂಚು ತೀರ್ಮಾನ ಮಾಡಿಕೊಳ್ಳುತ್ತಾರೆ. ತೀರ್ಮಾನವಾದ ನಂತರ ತಿಮ್ಮಿ ತನ್ನ ತಂದೆ ಮನೆಯಲ್ಲಿ ಬಂದು ಇರುವುದು ಸಹಜವಾಗಿಯೇ ಕಾಣುತ್ತದೆ. ಇಲ್ಲಿ ಚಿಕ್ಕ ಮಕ್ಕಳ ಭವಿಷ್ಯದ ಬಗ್ಗೆ ಯೋಚಿಸದ ಜನ ತಮ್ಮ ಇಷ್ಟ ಬಂದ ತೀರ್ಮಾನ ಕೈಗೊಳ್ಳುತ್ತಾರೆ. ಈ ರೀತಿಯ ತೀಮಾನಕ್ಕೆ ಪ್ರಮುಖ ಕಾರಣ ಹಳ್ಳಿಗಳಲ್ಲಿ ಇದುವರೆಗೂ ಪುರುಷ ಪ್ರಧಾನ ಕುಟುಂಬಗಳು ಇರುವುದೇ ಆಗಿದೆ.

ಕರೀಗೌಡರು ಈ ಕತೆಗಳ ಮೂಲಕ ತಾವು ಹಳ್ಳಿಗಳಲ್ಲಿ ಯಾವುದನ್ನು ಸುಧಾರಿಸಬೇಕು ಅದನ್ನು ಮಾಡುವವರು ಯಾರು ಎಂಬುದನ್ನು ತಿಳಿಯಪಡಿಸುತ್ತಾರೆ. ಅವರ ಶರೀರದ ಒಂದು ತುಡಿತವು ಹಳ್ಳಿಗಳ ಅಲ್ಲಿನ ಜನರ ಬಗ್ಗೆ ಹಾತೊರೆಯುತ್ತಾ ಇರುವುದನ್ನು ನಾವು ಕಾಣಬಹುದು. ಪ್ರತಿಯೊಬ್ಬರು ತಮ್ಮ ತಮ್ಮ ಸಮಸ್ಯೆಯನ್ನು ತಾವೇ ಸರಿಪಡಿಸಿಕೊಂಡು ಅದನ್ನು ಜನರ ಬಾಯಿಗೆ ತುತ್ತಾಗದ ರೀತಿಯಲ್ಲಿ ಜೀವನ

ನಡೆಸಿಕೊಂಡು ಹೋಗುವುದು. ಸ್ಟೇಷನ್, ಕೋರ್ಟ್ ಎಂದು ತಾವು ಕಷ್ಟಪಟ್ಟು ದುಡಿದ ಹಣವನ್ನು ಬೇರೆಯವರ ಪಾಲು ಮಾಡಬೇಡಿ ಎಂದು ಎಚ್ಚರಿಕೆಯ ಮಾತನ್ನು ಹೇಳುತ್ತಾರೆ. ನಗರಗಳು ದಿನದಿಂದ ದಿನಕ್ಕೆ ಹೇಗೆ ಏಳಿಗೆ ಆಗುತ್ತಿವೆ ಅದೇ ರೀತಿ ಹಳ್ಳಿಗಳ ಉನ್ನತೀಕರಣಕ್ಕಾಗಿ ಪ್ರಯತ್ನಿಸಿ ಎಂದು ತಮ್ಮ ಮನದಾಳದ ಮಾತನ್ನು ಹೇಳಿದ್ದಾರೆ.

# ಅಧ್ಯಾಯ - ೩

# ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿ ಕಂಡುಬರುವ ಶೈಕ್ಷಣಿಕ ಪ್ರಜ್ಞೆ

ಡಾ. ಕರೀಗೌಡ ಬಿಚನಹಳ್ಳಿಯವರು ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಬೀಚನಹಳ್ಳಿ ಗ್ರಾಮದಲ್ಲಿ ಕೃಷಿ ಸಂಸ್ಕೃತಿಯ ರೈತಾಪಿ ಕುಟುಂಬದಲ್ಲಿ ಜನಿಸಿದ ಕರೀಗೌಡರು ರೈತರ ಮಕ್ಕಳನ್ನು ಶೈಕ್ಷಣಿಕವಾಗಿ ಮುಂದುವರಿಸಬೇಕು, ಯಾವುದೇ ಕಾರಣದಿಂದಲೂ ಈ ಶಿಕ್ಷಣದಿಂದ ವಂಚಿತರಾಗಬಾರದು. ಇವರು ಶೈಕ್ಷಣಿಕವಾಗಿ ಮುಂದುವರಿದು ತಮ್ಮ ಹಳ್ಳಿಗಳಲ್ಲಿ ಆಚರಿಸುವ ಅರ್ಥವಿಲ್ಲದ ಆಚಾರ-ವಿಚಾರಗಳನ್ನು ತೊಡೆದು ಹಾಕಬೇಕು. ಹಳ್ಳಿಯ ಪ್ರತಿಯೊಂದು ಮಗುವು ಅಕ್ಷರ ಜ್ಞಾನವನ್ನು ಹೊಂದಿರಬೇಕು. ಈ ಕಾರ್ಯವನ್ನು ಕೈಗೊಳ್ಳುವಾಗ ಯಾವುದೇ ರೀತಿಯ ತೊಡಕುಗಳು ಎದುರಾದರೂ ಎದೆಗುಂದದೆ ಹೋರಾಡಬೇಕು ಈ ಹೋರಾಟ ಒಬ್ಬನಿಂದ ಸಾಧ್ಯವಾಗುವುದಿಲ್ಲ, ಇದರೊಂದಿಗೆ ನೂರಾರು ಜನ ಪಾಲ್ಗೊಂಡು ಒಗ್ಗಟ್ಟಿನಿಂದ ಹೋರಾಡಬೇಕು. ಈ ರೀತಿಯ ಹೋರಾಟದಿಂದಾಗಿ ಪ್ರತಿಯೊಂದು ಮಗುವು ಶಿಕ್ಷಣವನ್ನು ಪಡೆಯುತ್ತದೆ. ಶಿಕ್ಷಣ ಪಡೆಯಲು ಗಂಡು ಹೆಣ್ಣು ಎಂಬ ಭೇದವಿಲ್ಲದೆ ಎಲ್ಲರಿಗೂ ಮುಕ್ತವಾದ ಅವಕಾಶವನ್ನು ಕೊಡಬೇಕು. ಶಿಕ್ಷಣ ಪಡೆದಾಗ ಮಾತ್ರ ನಮ್ಮ ದೇಶ/ರಾಷ್ಟ್ರ ಸಾಕ್ಷರತೆಯನ್ನು ಸಾಧಿಸಲು ಸಾಧ್ಯ. ಸಂಪೂರ್ಣ ಸಾಕ್ಷರತೆಯ ಸಾಧಿಸಬೇಕು ಎಂದರೆ ಮೊದಲು ಹಳ್ಳಿಗಾಡಿನ ಮಕ್ಕಳಿಗೆ ಶಿಕ್ಷಣ ಕೊಡಬೇಕು.

ನಮ್ಮ ದೇಶದ ಬೆನ್ನೆಲುಬು ಹಳ್ಳಿಗಳಾಗಿರವುದರಿಂದ ಮೊದಲು ಹಳ್ಳಿಗಳ ಉದ್ಧಾರ ನಂತರ ನಗರ ಉದ್ಧಾರವಾಗಬೇಕು. ಇಂತಹ ವ್ಯವಸ್ಥೆ ಕಾರ್ಯಗತ-ವಾಗಬೇಕಾದರೆ ಹಳ್ಳಿಗಾಡಿನ ಜನರು ಶೈಕ್ಷಣಿಕ ಪ್ರಜ್ಞೆಯನ್ನು ಹೊಂದಿರಬೇಕು. ಈ ರೀತಿಯಾಗಿ ಪ್ರಗತಿಹೊಂದಿದ್ದಾಗ ಅವರು ಜಾಗೃತಗೊಳ್ಳುತ್ತಾರೆ. ಆಗ ಅವರು ಹಳ್ಳಿಯಲ್ಲಿಯಿರುವ ಅಜ್ಞಾನ ಮೂಢನಂಬಿಕೆಗಳ ವಿರುದ್ಧ ಹೋರಾಟ ಮಾಡುವ ಸಾಮರ್ಥ್ಯ ಹುಟ್ಟುತ್ತದೆ ಎಂಬ ಉದ್ದೇಶದಿಂದ ಪ್ರತಿಯೊಂದು ಕತೆಯಲ್ಲಿಯೂ ಶೈಕ್ಷಣಿಕವಾಗಿ ಜಾಗೃತಗೊಳಿಸುವ ಪ್ರಯತ್ನ ಮಾಡಿದ್ದಾರೆ.

**'ಒಡಲ ತವಕ'** ಈ ಕತೆಯಲ್ಲಿ ಸಿದ್ದೇಗೌಡ ಹೋರಿಗೆ ಹುಲ್ಲು ತಿನ್ನಿಸಲು ಹೋಗಿ ಹೆಬ್ಬೆರಳನ್ನು ಕಳೆದುಕೊಂಡು ಸಹಿ ಮಾಡಲು ಆಗದಿದ್ದಾಗ, ಅವನ ಹೆಬ್ಬೆರಳು ಇಲ್ಲದಿದ್ದ ಕಂಡು ಅಪಹಾಸ್ಯ ಮಾಡುತ್ತಾರೆ. ಇದರಿಂದ ಬಹಳವಾಗಿ ನೊಂದು ನಾನು ಸ್ಕೂಲಿಗೆ ಹೋಗದಿದ್ದರಿಂದ ಅಪಹಾಸ್ಯಕ್ಕೆ ಈಡಾದೆ ಮುಂದೆ ನನ್ನ ಮಕ್ಕಳನ್ನು ಎಷ್ಟೇ

ಕಷ್ಟವಾದರೂ ಕೂಡ ಓದಿಸಬೇಕೆಂದು ಪಣತೊಟ್ಟನು. ಈ ಪಣಕ್ಕೆ ತನ್ನ ಜೀವನಾಧಾರವಾಗಿದ್ದ ತನ್ನ ಹೋರಿಯನ್ನೇ ಇಟ್ಟ. ಇದು ಅವನ ಆತ್ಮಸ್ಥೈರ್ಯವನ್ನು ಎತ್ತಿ ತೋರುತ್ತದೆ. ಹೀಗೆ ನಮ್ಮಲ್ಲಿ ಛಲ ಬರಲು ಅವಮಾನಗಳು ಸಹಜವಾಗಿ ಆಗುತ್ತಿರಬೇಕು. ಈ ಸಂದರ್ಭದಲ್ಲಿ ದಾಸರ ಒಂದು ಮಾತು ಅರ್ಥ ಸ್ವಾರಸ್ಯ ಕೊಡುತ್ತದೆ. "ನಿಂದಕರು ಇರಬೇಕು ಮನೆಯಂಗಳದಾಗ ನಿಂದಕರಿರಬೇಕು".

ನಮ್ಮ ರೈತರು ಬಡತನವನ್ನು ಹಾಸಿ ಹೊದ್ದುಕೊಂಡಿದ್ದರು ತಮ್ಮ ಮಕ್ಕಳು ವಿದ್ಯಾವಂತರಾಗಿ, ದೊಡ್ಡ ಅಧಿಕಾರಿಯಾಗಬೇಕೆಂಬ ಹಂಬಲ ಬಹಳವಾಗಿರುತ್ತದೆ. ಇದು ಪ್ರತಿಯೊಂದು ತಂದೆತಾಯಿಯ ಬಯಕೆ. ಇನ್ನೊಂದು ಬಹಳ ಮುಖ್ಯವಾದ ವಿಷಯವೆಂದರೆ ಹಳ್ಳಿಗಳಲ್ಲಿ ಗಂಡುಮಕ್ಕಳ ವಿದ್ಯಾಭ್ಯಾಸಕ್ಕೆ ಕೊಡುವಷ್ಟು ಪ್ರೋತ್ಸಾಹ ಹೆಣ್ಣು ಮಕ್ಕಳಿಗೆ ಸಿಗುವುದಿಲ್ಲ. ಏಕೆಂದರೆ ಹೆಣ್ಣು ಎಷ್ಟೇ ಓದಿದರು ಒಲೆ ಊದುವುದು ತಪ್ಪುವುದಿಲ್ಲ ಎಂಬ ನಂಬಿಕೆ ನಮ್ಮ ಜನರಲ್ಲಿ ಮನೆಮಾಡಿದೆ. ಅದು ತಪ್ಪು ಭಾವನೆ ಎಂಬುವುದು 'ಒಡಲ ತವಕ'ದಲ್ಲಿ ಕಂಡುಬರುತ್ತಾನೆ. ಅವನೇ ಸಿದ್ದೇಗೌಡ ಅವನು ತನ್ನ ಮಗಳಾದ ಭಾಗ್ಯಳನ್ನು ಸ್ಕೂಲಿಗೆ ಕಳುಹಿಸಿ ಚೆನ್ನಾಗಿ ಓದುವಂತೆ ಪ್ರೋತ್ಸಾಹ ನೀಡುತ್ತಾನೆ. ಅವಳು ಶಾಲೆಗೆ ಪಸ್ಟ್ ಬಂದಾಗ ಆಗುವ ಸಂತೋಷಕ್ಕೆ ಮಿತಿಯಿರುವುದಿಲ್ಲ ನೀನು ಗಂಡು ಮಗುವಾದರೂ ಆಗಬಾರದಿತ್ತೇ ಎರು ನೊಂದುಕೊಳ್ಳುತ್ತಾನೆ. ಆದರೆ ದುರಾದೃಷ್ಟ ಎಂಬಂತೆ ಆಕೆಯ ತಾಯಿ ತೀರಿಕೊಂಡಾಗ ತಬ್ಬಲಿಗಳಾದ ಮಕ್ಕಳು ಅತಂತ್ರ ಸ್ಥಿತಿ ಎದುರಿಸಬೇಕಾಯಿತು.

ಹಳ್ಳಿಗಾಡಿನ ಪ್ರತಿಯೊಂದು ಊರಿನಲ್ಲಿ ಪ್ರಾಥಮಿಕ ಶಾಲೆ ಮಾತ್ರವಿರುತ್ತದೆ. ಮಾಧ್ಯಮಿಕ ಶಿಕ್ಷಣಕ್ಕಾಗಿ ಪಕ್ಕದೂರಿಗೆ ಹೋಗಬೇಕಾದ ವ್ಯವಸ್ಥೆ. ಅಲ್ಲಿಗೆ ಬಸ್ಸಿನ ಸೌಕರ್ಯವು ಇರುವುದಿಲ್ಲ. ಹಾಗೆಯೇ ಕಾಲುನಡುಗೆಯಲ್ಲಿ ನಡೆಯಬೇಕಾಗಿರುತ್ತದೆ. ಹೀಗೆ ಹೋಗುವಾಗ ಪೋಲಿ ಹುಡುಗರು ಹುಡುಗಿಯರ ಅಂದ ಚಂದ ಮೈಮಾಟವನ್ನು ಕಂಡು ಕಣ್ಣುಮನಸ್ಸನ್ನು ತುಂಬಿಸಿಕೊಳ್ಳುತ್ತಿದ್ದರು. ಈ ರೀತಿಯ ಕಷ್ಟಪಟ್ಟರೂ ಓದುವ ಆಸಕ್ತಿಯೆಂದೂ ಕಡಿಮೆಯಾಗಿರುವುದಿಲ್ಲ. ಓದಬೇಕು ಎಂಬ ತವಕ ಅವರ ನರನಾಡಿಗಳಲ್ಲಿ ಮಿಡಿಯುತ್ತಿರುತ್ತದೆ. ಆದರೆ ಹೆಣ್ಣು ಮಕ್ಕಳಿಗಿರುವ ಆಸಕ್ತಿ ಗಂಡುಮಕ್ಕಳಲ್ಲಿ ಕಂಡುಬರುವುದಿಲ್ಲ. ಈ ಹುಡುಗರು ನನಗೆ ಇಂಗ್ಲೀಷ್ ಕಷ್ಟ ನಾನು ಎಷ್ಟೇ ಓದಿದ್ದರು ತಲೆಗೆ ಹತ್ತುವುದಿಲ್ಲ ಎಂದು ಸ್ಕೂಲನ್ನು ಬಿಟ್ಟು ಮನೆಯಲ್ಲಿ ದನಕರು ನೋಡಿಕೊಳ್ಳಲು ನಿರ್ಧರಿಸಿ ಅಪ್ಪ ಹಾಕಿದ ಆಲದ ಮರಕ್ಕೆ ಜೋತು ಬೀಳುತ್ತಾನೆ. ಗ್ರಾಮೀಣ ಮಕ್ಕಳಿಗೆ ಇಂಗ್ಲೀಷ್ ಎಂದರೆ ಕಬ್ಬಿಣದ ಕಡಲೇ ಎಂಬ ಭಾವನೆ ಮನಮೂಡಿರುತ್ತದೆ. ಇದನ್ನು ಹೋಗಲಾಡಿಸಿ ಆ ವಿಷಯ ಬಗ್ಗೆ ಪ್ರೀತಿ ತುಂಬುವುದು ತಂದೆತಾಯಿಯ ಆದ್ಯ ಕರ್ತವ್ಯವಾಗಿರುತ್ತದೆ.

ಪುರುಷ ಪ್ರಧಾನವಾದ ಸಮಾಜದಲ್ಲಿ ಹೆಣ್ಣು ಮಗಳಾದ ಭಾಗ್ಯಳನ್ನು ಓದಿಸುವ ತವಕ ಅವನಲ್ಲಿ ಮೂಡಿದರು, ಬಡತನ ಬೇಗೆಯಿಂದ ಅವನ ಆಸೆ ಕೈಗೂಡುವುದಿಲ್ಲ. ಓದಿ ದೊಡ್ಡ ಅಧಿಕಾರಿಯಾಗಬೇಕಿದ್ದ ಮಗಳು ಮನೆಯಲ್ಲಿಯೇ ಉಳಿಯಬೇಕಾಯಿತು. ಹಣ ಆಸ್ತಿ ಇರುವ ಕುಟುಂಬ ಮಕ್ಕಳಿಗೆ ಓದುವ ಆಸಕ್ತಿಯೇ ಇರುವುದಿಲ್ಲ. ಹೀಗೆ ಹಳ್ಳಿಯಲ್ಲಿ ಅನೇಕ ಪ್ರತಿಭೆಯುಳ್ಳ ಮಕ್ಕಳಿದ್ದರೂ ಕೂಡ ಆರ್ಥಿಕ ಸ್ಥಿತಿಯಿಂದಾಗಿ ಶಾಲೆ ಬಿಟ್ಟು ಮನೆಯಲ್ಲಿ ತಂದೆತಾಯಿಗೆ ಸಹಾಯಕರಾಗಿ ಇರಬೇಕಾಗುತ್ತದೆ. ಹೀಗೆ ಓದು ಬಿಟ್ಟು ಮನೆಯಲ್ಲಿ ಇರುವ ಹೆಣ್ಣು ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡಿ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುತ್ತಾರೆ. ಇದು ಹಳ್ಳಿಗಳಲ್ಲಿ ಸಹಜವಾಗಿ ನಡೆಯುವ ಪದ್ಧತಿ.

**'ಸಂಬಂಧ'** ಕತೆಯಲ್ಲಿ ವಿದ್ಯಾಭ್ಯಾಸ ಮಾಡಿಸಬೇಕಾದ ಗುರು ತನ್ನ ಕರ್ತವ್ಯವನ್ನು ಮರೆತು ಬಡರೈತರಿಗೆ ಸಾಲ ಕೊಟ್ಟು ಅವರಿಂದ ಬಡ್ಡಿ ಚಕ್ರಬಡ್ಡಿ ವಸೂಲಿ ಮಾಡುವುದು, ಅದಕ್ಕೆ ಸಹಾಯಕವಾಗಿ ಬಡ್ಡಿಗೆ ಹಣ ಪಡೆಯಲು ಮಕ್ಕಳನ್ನು ಈ ಕ್ರಿಯೆಗೆ ತೊಡಗಿಸಿಕೊಂಡು ಅ ಮಕ್ಕಳಿಗೆ ಕೊಡುವ ಮಾನಸಿಕ ದೈಹಿಕ ದಂಡ ಹೇಳತೀರದು. ನಮಗೆ ಗುರು ಎಂದರೆ ದೈವಸ್ವರೂಪ ತಂದೆತಾಯಿಗೆ ಕೊಡುವಷ್ಟೇ ಗೌರವವನ್ನು ನಾವು ಗುರುಗಳಿಗೆ ಕೊಡುತ್ತೇವೆ. ಆದ್ದರಿಂದಲೇ ನಾವು ಗುರುವನ್ನು 'ಗುರುದೇವೋಭವ' ಎಂದು ಅವರನ್ನು ಎತ್ತರದ ಸ್ಥಾನದಲ್ಲಿರಿಸಿ ಪೂಜಿಸುತ್ತೇವೆ. ಆದರೆ ಇಲ್ಲಿ ಸ್ವಾಮಿ ಕಾರ್ಯಗಿಂತ ಹೆಚ್ಚಾಗಿ ಸ್ವಕಾರ್ಯವೇ ಆಗುವುದು ಕಂಡುಬರುತ್ತದೆ.

ಹಳ್ಳಿಗೆ ಮೇಷ್ಟ್ರರಾಗಿ ಹೋಗುವ ವ್ಯಕ್ತಿ ತನ್ನ ವೃತ್ತಿಗೆ ನ್ಯಾಯ ಒದಗಿಸಬೇಕು. ಹಳ್ಳಿಯ ಮುಗ್ಧ ಜೀವಿಗಳಲ್ಲಿ ತಿಳುವಳಿಕೆಯನ್ನು ನೀಡಬೇಕು ಅವರು. ಮಕ್ಕಳನ್ನು ಶಾಲೆಗೆ ಕಳುಹಿಸುವುದೇ ಕಷ್ಟ ಅಂತಹ ಪರಿಸ್ಥಿತಿಯಿರುವಾಗ ಆ ಮಕ್ಕಳನ್ನು ಆಕರ್ಷಿಸಿಕೊಂಡು ಅವರಲ್ಲಿ ಶಾಲೆಗೆ ಬರುವ ಕುತೂಹಲವನ್ನು ತುಂಬಬೇಕು. ಹೀಗೆ ಮಾಡಿ ಮಕ್ಕಳಲ್ಲಿ ಆರಂಭದ ಶಿಕ್ಷಣ ಚೆನ್ನಾಗಿ ನೀಡಬೇಕು. ಆರಂಭಿಕ ಶಿಕ್ಷಣ ಉತ್ತಮವಾಗಿದ್ದರೂ ಅವರ ಮುಂದಿನ ಶಿಕ್ಷಣ ಉತ್ತಮವಾಗಿರುತ್ತದೆ ಎಂಬುದರಲ್ಲಿ ಯಾವ ಸಂಶಯವಿರುವುದಿಲ್ಲ. ಆ ಮಕ್ಕಳ ಬೆನ್ನೆಲುಬಾಗಿ, ಅವರ ದಾರಿದೀಪವಾಗಿ, ಮಾರ್ಗದರ್ಶನ ನೀಡಬೇಕಾದುದು ಗುರುವಿನ ಕೆಲಸ, ಆದರೆ ಇತ್ತೀಚೆಗೆ ಅದು ವಿರುದ್ಧವಾಗಿದೆ. ಮಕ್ಕಳನ್ನು ತಮ್ಮ ವ್ಯವಹಾರಕ್ಕೆ ಬಳಸಿಕೊಂಡು ಅವರನ್ನು ದಾರಿ ತಪ್ಪಿಸಿ ತನ್ನ ಕೆಲಸಕ್ಕೆ ಹೆಚ್ಚಾಗಿ ಬಳಸಿಕೊಳ್ಳುತ್ತಿರುವುದನ್ನು ಸಮಾಜದಲ್ಲಿ ಕಾಣಬಹುದು. ಇಂತಹ ಒಬ್ಬ ಗುರು ನಮ್ಮ ಹಳ್ಳಿಗೆ ಯೋಗ್ಯವಲ್ಲ. ಇವರ ಮಾರ್ಗದರ್ಶನದಲ್ಲಿ ಬೆಳೆದ ಮಕ್ಕಳು ಸಮಜಘಾತುಕರಾಗಿ ನಮ್ಮ ದೇಶವನ್ನು ನಾಶಮಾಡುವ ಹುನ್ನಾರ ನಡೆಸುವ

ತಂಡವಾಗಿ ಪರಿಣಮಿಸುತ್ತದೆ. ಇಂತವರನ್ನು ಹಳ್ಳಿಯಿಂದಲೇ ಬಹಿಷ್ಕರಿಸುವಂತೆ ಜನ ಜಾಗೃತರಾಗಬೇಕು.

ಈ ಕತೆಯಲ್ಲಿ ಬರುವ ನಂಜಯ್ಯ ಮೇಷ್ಟ್ರು ಸುತ್ತ ಮುತ್ತಲಿನ ಹಳ್ಳಿಗೆ ದೊಡ್ಡ ಕುಳವಾಗಿದ್ದರು. ಬಡವರಿಗೆ ಬಡ್ಡಿಗೆ ಹಣವನ್ನು ಕೊಟ್ಟು ಅವರಿಂದ ಬಡ್ಡಿ ವಸೂಲಿ ಮಾಡುವುದೇ ದಿನಚರಿಯಾಗಿತ್ತು. ಮಕ್ಕಳಿಗೆ ಬೋದಿಸಬೇಕಾದ ಗುರುಗಳು ಲೇವಾದೇವಿ ಕೆಲಸಕ್ಕೆ ತೊಡಗಿದ್ದರೆ ಮಕ್ಕಳ ಗತಿ ಅದೋಗತಿ ಗುರುವಿನ ಬೋಧನಾ ರೀತಿ ಸರ್ಕಾರದ ನಿಯಮಕ್ಕೆ ವಿರುದ್ಧವಾಗಿದ್ದವು. ವರ್ಷ ಪೂರ್ತಿ ಮಾಡಬೇಕಾದ ಪಾಠವನ್ನು ಒಂದೇ ಪಿರಿಯಡ್‌ನಲ್ಲಿ ಮಾಡಿ ಮುಗಿಸುತ್ತಿದ್ದರು. ಈ ರೀತಿ ಶಿಕ್ಷಣ ಪದ್ಧತಿಯನ್ನು ಅನುಸರಿಸುವುದರಿಂದಲೇ ಹಳ್ಳಿಗಳಲ್ಲಿ ಶಿಕ್ಷಣಮಟ್ಟ ಕುಂದುತ್ತಾ ಬರುತ್ತಿರುವುದು, ಹಳ್ಳಿಗಾಡಿನ ಮಕ್ಕಳು ನಗರಪ್ರದೇಶ ಮಕ್ಕಳೊಡನೆ ಪೈಪೋಟಿ ನಡೆಸಲು ಸಾಧ್ಯವಾಗದೆ ಅವರ ಮಾನಸಿಕ ಸ್ಥೈರ್ಯಕುಂದುತ್ತಿದೆ.

ಹಳ್ಳಿಯ ಮೇಷ್ಟ್ರರು ಮಕ್ಕಳ ಮುಗ್ಧತೆಯನ್ನು ದುರುಪಯೋಗಪಡಿಸಿ ಕೊಳ್ಳುವುದನ್ನು ಹೆಚ್ಚಾಗಿ ಕಾಣಬಹುದು. ಅವರ ವೈಯಕ್ತಿಕ ವ್ಯವಹಾರಕ್ಕಾಗಿ ಮಕ್ಕಳನ್ನು ಬಳಸಿಕೊಂಡು, ಅವರ ಕೆಲಸಕ್ಕೆ ಒಪ್ಪದ ಮಕ್ಕಳಿಗೆ ಮಾನಸಿಕ ದಂಡನೆ ನೀಡುವುದನ್ನು ಕಾಣಬಹುದು. ಪ್ರಾಚೀನ ಕಾಲದಲ್ಲಿ ವಿದ್ಯೆ ಕಲಿಸುವುದೆಂದರೆ ಅದು ಪವಿತ್ರ ಕಾರ್ಯವೆಂಬ ಭಾವನೆಯಿತ್ತು. ಈಗಿನ ಜಗತ್ತಿನಲ್ಲಿ ಶಿಕ್ಷಣ ಕ್ಷೇತ್ರವನ್ನೇ ಅಪವಿತ್ರಗೊಳಿಸುವ ಮಂದಿ ಪ್ರಪಂಚದಲ್ಲಿ ಹುಟ್ಟಿದ್ದಾರೆ. ಇದರಿಂದ ಈ ಕ್ಷೇತ್ರದಲ್ಲಿ ಅವ್ಯವಹಾರ ಹೆಚ್ಚಾಗಿ, ಎಲ್ಲೆಲ್ಲೂ ಲಂಚವೇ ತಾಂಡವವಾಡುತ್ತಿದೆ. ಶಿಕ್ಷಕನಾದವನು ತನ್ನ ಜವಾಬ್ದಾರಿಯೇನು ಎಂಬುದನ್ನು ಅರಿತು ಅದಕ್ಕೆ ನ್ಯಾಯ ಒದಗಿಸಬೇಕು ತಾನು ಮಾಡುವ ಕೆಲಸಲ್ಲಿ ದೇವರನ್ನು ಕಾಣಬೇಕು. ಅದನ್ನು ಬಿಟ್ಟು ತನ್ನ ಮನಬಂದಂತೆ ನಡೆದುಕೊಳ್ಳುವುದಲ್ಲ, ಗುರು ಎಂದರೆ ಸಮಾಜದ ನಿರ್ಮಾಣಕರನ್ನು ಸೃಷ್ಟಿಸುವ ಸೃಷ್ಟಿಕರ್ತ. ಈತನ ಸೇವೆ ನಮ್ಮ ಹಳ್ಳಿಗಾಡಿನ ಮಕ್ಕಳಿಗೆ ಅತ್ಯಗತ್ಯ.

ಶಿಕ್ಷಕನಾದವನು ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿಗಾಗಿ ದುಡಿಯಬೇಕು. ಹಳ್ಳಿಗಾಡಿನ ಮುಗ್ಧಜೀವಿಗಳ ಜ್ಞಾನದದೀವಿಗೆಯಾಗಬೇಕು. ಆ ಬೆಳಕು ಆರದೆ ತಮ್ಮ ಗುರಿಯನ್ನು ಮುಟ್ಟುವವರೆಗೂ ಪ್ರಜ್ವಲಿಸುವಂತೆ ಮಾಡಬೇಕು. ವಿದ್ಯಾರ್ಥಿಗಳ ನೇತಾರರಾಗಿ ತಮ್ಮ ಜವಾಬ್ದಾರಿಯನ್ನು ನಿರ್ವಹಿಸಿದಾಗ ಮಾತ್ರ ತಮಗೆ ತಮ್ಮ ವೃತ್ತಿಗೆ ನ್ಯಾಯ ಒದಗಿಸಲು ಸಾಧ್ಯ. ಗುರುವಿಗೆ ತನ್ನ ತಂದೆ ತಾಯಿಗಿಂತ ಹೆಚ್ಚಿನ ಜವಾಬ್ದಾರಿ ಇರುತ್ತದೆ. ಇದನ್ನು ಮರೆಯದೇ ತನ್ನ ಕಾರ್ಯದಲ್ಲಿ ನಿಷ್ಠೆಯಿಂದ ನಿರ್ವಹಿಸುವುದು ಆತನ ಕರ್ತವ್ಯ. ಇದನ್ನು ನೆನಪಿನಲ್ಲಿ ಇಟ್ಟುಕೊಂಡು ತನ್ನ ಜವಾಬ್ದಾರಿಯನ್ನು ನಿರ್ವಹಿಸಬೇಕು.

**'ಕಳಕಳಿ'** ಎಂಬ ಕತೆಯಲ್ಲಿ ಒಂದು ಮಗುವಿಗೆ ಓದುವ ತವಕ. ಓದಲು ತನ್ನ ತಂದೆ ತಾಯಿಯನ್ನು ಆಶ್ರಯಿಸುತ್ತಾನೆ. ಬೆಳಗ್ಗಿನ ಜಾವದಲ್ಲಿ ಎದ್ದ ಮಗು "ದೀಪ ಅತ್ಸಪ್ಪ" ಎಂದು ಹೇಳಿದಾಗ "ಯಾಕ್ಲಾ?" ಎಂದು ಕೇಳುತ್ತಾನೆ. ಮಗು ಓದ್ಕೋಬೇಕು ನಾಳೆ ಪರೀಕ್ಷೆ ಅದೆ" ಎಂದ. "ಅಷ್ಟೇನಾ? ಬಿದ್ಕೊಳ್ಳ ನಾನೆಲ್ಲೋ ಏನೋ ಆಗೋಯ್ತೇನೋ ಅಂತ್ಕೊಂಡಿದ್ದೆ" ಎಂದು ಮತ್ತೆ ನಿದ್ದೆಗೆ ಹೋದಾಗ ಆ ಮಗು ತನ್ನ ತಾಯಿಯನ್ನು ಎಬ್ಬಿಸಿ ಬೆಂಕಿಪೊಟ್ಟಣವನ್ನು ಕೇಳಿದಾಗ ಬೆಂಕಿಪೊಟ್ಟಣ ಕಾಲಿಯಾಗಿರುತ್ತದೆ. ಆತ ಗೌಡರ ಜಗುಲಿಯ ಮೇಲೆ ಮಲಗಿರುವವರ ಬಳಿ ಹೋಗಿ ಇಸಿಕೊಂಡು ದೀಪ ಅಚ್ಚಿ ಓದಲು ಆರಂಭಿಸುವುದು. ಇಂತಹ ಕಷ್ಟದಲ್ಲಿಯೂ ಓದಬೇಕು ಎಂಬ ಮಗುವಿನ ಆಸಕ್ತಿ ನಿಜವಾಗಲೂ ಮೆಚ್ಚುವಂತಹದು. ಆದರೆ ಆ ಮಗುವಿಗೆ ತಂದೆಯ ಪ್ರೋತ್ಸಾಹವಿಲ್ಲ, ಆದರೂ ಅದಕ್ಕೆ ನಾನು ಓದಬೇಕೆಂಬ ತವಕ ಇರುವುದು ಮೆಚ್ಚುವಂತಹದು.

ಸಾಮಾನ್ಯವಾಗಿ ಹಳ್ಳಿಗಾಡಿನ ಪ್ರದೇಶದಲ್ಲಿ ಕಂಡುಬರುವ ಸಮಸ್ಯೆ ಎಂದರೆ ಕೆಲವೊಂದು ಹಳ್ಳಿಗಳಲ್ಲಿ ವಿದ್ಯುತ್ ಸೌಲಭ್ಯವಿಲ್ಲದಿರುವುದು. ಜೊತೆಗೆ ಮಕ್ಕಳಿಗೆ ಇಂಗ್ಲೀಷ್ ಎಂದರೆ "ಕಬ್ಬಿಣದ ಕಡಲೆ" ಎಂಬ ಭಾವನೆಯನ್ನು ಮಕ್ಕಳಲ್ಲಿ ಭಿತ್ತಿದ್ದಾರೆ. ಗುರುಗಳಾದವರೂ ಸರಿಯಾದ ರೀತಿಯಲ್ಲಿ ಯಾವುದೇ ವಿಷಯವನ್ನು ಸುಲಭ ಮಾರ್ಗದಲ್ಲಿ ಕಲಿಯುವಂತೆ ತುಂಬಬೇಕು. ಕಷ್ಟವಾದ ವಿಷಯವನ್ನು ಪ್ರೀತಿಯಿಂದ ಓದುವಂತೆ ಮಾಡಬೇಕು. ಭಯದ ವಾತಾವರಣವನ್ನು ಬಹಳಷ್ಟು ದೂರ ಇರಿಸಬೇಕು ಆಗ ಯಾವುದೇ ಕಷ್ಟವಾದುದನ್ನು ಇಷ್ಟದಿಂದ ಕಲಿತರೆ ಬಲು ಸುಲಭವಾಗುತ್ತದೆ. ಎಲ್ಲ ಮಕ್ಕಳ ಮಾನಸಿಕ ಸಾಮರ್ಥ್ಯ ಒಂದೇ ರೀತಿಯಾಗಿರುವುದಿಲ್ಲ. ಅದನ್ನು ಅರ್ಥಮಾಡಿಕೊಂಡು ಗುರುಗಳು ಓದಿಸಬೇಕು. ಹೀಗೆ ಓದಿಸುವುದರ ಬದಲು ದಂಡಿಸಿದ್ದಾರೆ. ಶಿಕ್ಷಕನ ಭಯದ ಜೊತೆಗೆ ವಿಷಯವೂ ಕಷ್ಟವಾಗಿ ಶಾಲೆಯನ್ನು ಬಿಡುವಂತಹ ಎಷ್ಟು ಮಕ್ಕಳನ್ನು ನಾವು ಕಾಣಬಹುದು.

ಹಳ್ಳಿಗಾಡಿನ ಮಕ್ಕಳು ಶೈಕ್ಷಣಿಕವಾಗಿ ಏಕೆ ಹಿಂದುಳಿದಿದ್ದಾರೆ ಎಂದರೆ ತಂದೆ ತಾಯಿ ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ಕೊಡದೆ ಇರುವುದು. ಓದಲು ಬೇಕಾದ ಪಠ್ಯಪುಸ್ತಕ ಪೆನ್ಸಿಲ್, ಪೆನ್ನು ಇವುಗಳನ್ನು ತೆಗೆದುಕೊಡುವದರಲ್ಲಿಯೂ ನಕಾರ ಮಾಡುವುದೇ ಹೆಚ್ಚು. ಆದರೆ ನಗರ ಪ್ರದೇಶದ ಮಕ್ಕಳಾದರೆ ತಮ್ಮ ತಂದೆ ತಾಯಿಯರಲ್ಲಿ ಧೈರ್ಯದಿಂದ ತಮಗೆ ಬೇಕಾದ ವಸ್ತುಗಳನ್ನು ಪಡೆಯುತ್ತಾರೆ. ಹಳ್ಳಿಗಾಡಿನ ಮಕ್ಕಳಲ್ಲಿ ಈ ರೀತಿ ಧೈರ್ಯ ಕಾಣುವುದಿಲ್ಲ. ಪ್ರತಿಯೊಂದರಲ್ಲೂ ಹಿಂಜರಿಕೆ ಭಾವನೆಯ ಮೈಗೂಡಿಸಿಕೊಂಡು ಬಂದಿವೆ.

ಮಕ್ಕಳಲ್ಲಿ 'ಪರೀಕ್ಷೆಯ ಭಯ' ಸರ್ವೇಸಾಮಾನ್ಯವಾಗಿರುತ್ತದೆ. ವರ್ಷ ಪೂರ್ತಿ ಓದಿದ ಮೂರು ಗಂಟೆಯಲ್ಲಿ ಬರೆಯುವುದಕ್ಕೆ ಹೆದರುವ ಮಕ್ಕಳಲ್ಲಿ ಶಿಕ್ಷಕನು ಪರೀಕ್ಷೆಯ ಬಗ್ಗೆ ತಿಳುವಳಿಕೆ ಹೇಳಿ ಭಯವನ್ನು ಹೋಗಲಾಡಿಸಬೇಕು. ಆದರೆ 'ಕಳಕಳಿ' ಕತೆಯಲ್ಲಿ ಗುರುಗಳೇ "ನೀನು ಇಂಗ್ಲೀಷ್‌ನಲ್ಲಿ ಚೆನ್ನಾಗಿ ಬರೆಯದೆ ಇದ್ದರೆ ಫೇಲ್ ಮಾಡ್ತೀನಿ, ಯಾರ ದಾಕ್ಷಿಣ್ಯನೂ ನಾನು ನೊಡೋದಿಲ್ಲ' ಎಂದು ಹೇಳಿದ್ದು ರಾಮಣ್ಣನಿಗೆ ನೆನಪಿಗೆ ಬಂದು ಆತನಿಗೆ ಮತ್ತೆ ಗಾಬರಿಯಾಯಿತು. ಈ ರೀತಿ ಗುರುಗಳೇ ಮಕ್ಕಳಿಗೆ ಗಾಬರಿ ಹುಟ್ಟಿಸಿದರೆ ಧೈರ್ಯ ಹೇಳುವವರು ಯಾರು? ಈ ಹಳ್ಳಿಗಾಡಿನಲ್ಲಿ ಬೆಳಗ್ಗೆಯಿಂದ ಸಂಜೆಯವರೆಗೂ ದುಡಿಯುವ ತಂದೆತಾಯಿಗಳು ದೀಪವನ್ನು ಉರಿಸಿಕೊಂಡು ಓದಲು ಬಿಡುವುದಿಲ್ಲ. ಈ ಬೆಳಕಿಗೆ ನಿದ್ದೆ ಬರಲ್ಲಾ ಬೆಳಿಗ್ಗೆ ಎದ್ದು ಓದುವಂತೆ ಮಲಗು ಎಂದು ಹೇಳಿ ಬೆಳಿಗ್ಗೆ ಮತ್ತೊಂದು ರಾಗ ಹಾಡುವರು. ಈ ಹಳ್ಳಿಗಾಡಿನ ಮಕ್ಕಳಿಗೆ ಸಹಕಾರ ನೀಡುವವರೆ ಇಲ್ಲ.

ಹಳ್ಳಿಗಾಡಿನ ಮಕ್ಕಳಿಗೆ ಓದುವೊಂದೇ ಕಾಯಕವಲ್ಲ ಅವು ಓದುವುದರ ಜೊತೆಗೆ ಇನ್ನಿತರ ಕೆಲಸವನ್ನು ಮಾಡಬೇಕು. ಕಾಯಕ ಮುಗಿದ ಮೇಲೆ ಶಾಲೆಗೆ ಹೋಗಬೇಕು. ಮಧ್ಯೆ ತಂದೆಯ ಅಪಸ್ವರ ನಾದ ಕೇಳಿ ಓದಲು ಬೇಕಾಗುವ ವಾತಾವರಣವೇ ಇರುವುದಿಲ್ಲ. ಈ ಕಷ್ಟಗಳ ನಡುವೆ ಮಗು ಪರೀಕ್ಷೆಗೆ ರೆಡಿಯಾಗಬೇಕಿತ್ತು. ಓದುವುದಕ್ಕೆ ಒಂದು ರೀತಿಯ ಸಮಸ್ಯೆಯೆಂದರೆ ಬರೆಯಲು ಮತ್ತೊಂದು ಸಮಸ್ಯೆ. ಪರೀಕ್ಷೆಯ ತರಾತುರಿಯಲ್ಲಿ ಪೆನ್ನು ನೋಡಿದಾಗ ಅಲ್ಲಿರಲಿಲ್ಲ. ತಕ್ಷಣ ತನ್ನ ಮಾಸ್ಟರಿಗೆ ಕೊಟ್ಟಿರುವುದು ನೆನಪಾಯಿತು. ಅದನ್ನು ಕೇಳಿದರೆ ಎಲ್ಲಿ ಬೈಯ್ಯುವರು ಎಂದು ಹೆದರಿ ತನ್ನ ತಾಯಿ ಬಳಿ ಪೆನ್ನು ತೆಗೆದುಕೊಡುವಂತೆ ಹೇಳಿದಾಗ ಆಕೆ ಗಂಡನನ್ನು ಕೇಳಿದಾಗ ತಿರಸ್ಕಾರ ರಾಗ ಈ ಮಗು ತಂದೆಗೆ ಕಾರಣ ತಿಳಿಸಿ ಪೆನ್ನು ಪಡೆಯುವ ಧೈರ್ಯವಿರಲಿಲ್ಲ. ನಾವು ಇಲ್ಲಿ ಇನ್ನೊಂದು ವಿಷಯವನ್ನು ಗಮನಿಸಬಹುದು. ಗಂಡು ಮಕ್ಕಳು ತಮ್ಮ ತಂದೆತಾಯಿ ಬಳಿ ಕೇಳುವಂತೆ ಸಲೀಸಾಗಿ ತಂದೆಯನ್ನು ಕೇಳುವುದಿಲ್ಲ.

ನಗರವಾಸಿಗಳು ತಮ್ಮ ಮಕ್ಕಲು ಓದಿದರೆ ಸಾಕು ಎಷ್ಟು ಬೇಕಾದರೂ ಹಣ ಖರ್ಚು ಮಾಡುತ್ತೇವೆ ಎಂದರೂ ಕೂಡ ಅಂತಹ ಮಕ್ಕಳು ಓದದೇ ಪೋಲಿಗಳಾಗಿ ಅಲೆದಾಡುತ್ತಾರೆ. ಹಳ್ಳಿಗಾಡಿನ ಮಕ್ಕಳಿಗೆ ಓದುವ ತವಕವಿದೆ, ಆದರೆ ಓದಿಸುವ ತಾಖತ್ ನಮ್ಮ ತಂದೆತಾಯಿಗಳಲ್ಲಿ ಇರುವುದಿಲ್ಲ. ಸರಕಾರ ಇಂತಹ ಬಡಮಕ್ಕಳಿಗೆ ಸೌಕರ್ಯ ಮಾಡಿಕೊಟ್ಟರೆ, ಅವರು ವಿದ್ಯಾವಂತರಾಗಿ ದೇಶದ ಏಳಿಗೆಗಾಗಿ ದುಡಿಯುತ್ತಾರೆ. ಈ ರೀತಿಯ ಕಾರ್ಯ ಕೈಗೊಳ್ಳಬೇಕಾದದು ಸರ್ಕಾರದ ಕರ್ತವ್ಯ-

ವಾಗಿರುತ್ತದೆ. ಬಡಮಕ್ಕಳಿಗೆ ಪ್ರೋತ್ಸಾಹ ಧನ ನೀಡಬೇಕು. ಯಾವುದೇ ಕಾರಣ-ದಿಂದಲೂ ನಮ್ಮ ಹಳ್ಳಿಗಾಡಿನ ಮಕ್ಕಳು ವಂಚಿತರಾಗದಂತೆ ತಡೆಯಬೇಕು.

'ದನಿ' ಈ ಕತೆಯಲ್ಲಿ ಕಿತ್ತು ತಿನ್ನುವ ಬಡತನ ಸಂಸಾರದ ಜವಾಬ್ದಾರಿಯಿಲ್ಲದೆ ದೇಶಾಂತರ ಹೋಗಿರುವ ಗಂಡ ಆಸ್ತಿಯಿಲ್ಲದೆ ಕೂಲಿನಾಲಿ ಮಾಡಿ ತನ್ನ ಮಕ್ಕಳನ್ನೇ ಸಾಕುವ ಸ್ಥಿತಿ ಎಂತಹವರ ಕರುಳನ್ನು ಚುರುಕು ಎನ್ನಿಸುವಂತೆ ಇದೆ. ಓದುವ ಮಗಳನ್ನು ಶಾಲೆ ಬಿಡಿಸಿ, ತನ್ನ ತಂಗಿಯರನ್ನು ನೋಡಿಕೊಳ್ಳುವಂತೆ ಹೇಳಿ ಕೂಲಿಗೆ ಹೋಗುವ ತಾಯಿ, ಹಗಲು ಇರುಳು ಎನ್ನದೆ ತನ್ನ ಜೀವ ತೇಯುತ್ತಿದ್ದಾನೆ. ಆರಂಭದಲ್ಲಿ ನಾಗಿಗೂ ಕೂಡ ಸ್ಕೂಲಿಗೆ ಹೋಗುವ ತವಕ. ಕೆಂಚವ್ವ ಸ್ಕೂಲಿಗೆ ಸೇರಿಸಿದ ಹೊಸದರಲ್ಲಿ ಉತ್ಸಾಹದಿಂದ ಹೊಸಲಂಗ ಹೊಲಿಸಿ ಇಕ್ಕಿ ಸ್ಕೂಲಿಗೆ ಕಳುಹಿಸಿದ್ದಳು. ನಾಗಿ ಸ್ಕೂಲು ಮುಗಿಸಿ ಬರುತ್ತಿದ್ದರೆ ಕೆಂಚವ್ವನಿಗೆ ಅದನ್ನು ಕಂಡು ಹೆಮ್ಮೆಯಾಗುತ್ತಿತ್ತು.

ಸ್ವಲ್ಪ ದಿನ ಕಳೆದ ಮೇಲೆ ಕೆಂಚವ್ವ ಯೋಚಿಸಿದಳು: ತನ್ನ ಮಗಳು ನಾಗಿ ಸ್ಕೂಲಿಗೆ ಹೋದಮೇಲೆ ತಾನು ಇತ್ತ ಕೂಲಿಗೆ ಬಂದಮೇಲೆ, ತನ್ನ ಉಳಿದ ಎರಡು ಸಣ್ಣ ಮಕ್ಕಳುಗಳನ್ನು ನೋಡಿಕೊಳ್ಳುವವರು ಯಾರು ಎಂದು ಒಮ್ಮೆ ಅವು ಎರಡೂ ಆಡುತ್ತಾ ತಿಪ್ಪೆಗುಂಡಿಯವರೆಗೂ ಹೋಗಿ ಗುಂಡಿಗೆ ಬಿದ್ದು ಸಾಯುವ ಸ್ಥಿತಿಯಲ್ಲಿದ್ದಾಗ ಯಾರೋ ಕಂಡವರೂ ಅವನ್ನು ಬದುಕಿಸಿದ್ದಾರಂತೆ. ಕೆಂಚ್ವನಿಗೆ ತಾನು ಕೂಲಿಗೋದರೂ ಅಲ್ಲಿ ಅದೇ ಚಿಂತೆ. ಮನೆ ಹತ್ತಿರ ತನ್ನ ಮಕ್ಕಳು ಏನು ಮಾಡಿಕೊಂಡವೋ, ಎತ್ತಿ ಮಾಡಿಕೊಂಡವೊ ಎಂದು ಆಗ ಕೆಂಚವ್ವ ಯೋಚಿಸಿ "ನನ್ನ ಮಗಳು ಓದಿ ನನ್ಗೆ ತಂದಿಕ್ಕೊದು ಅಷ್ಟರಲ್ಲೇ ಇರ್ಲಿ ನನ್‌ಕಟ್ಕೊಂಡ್ ಗಂಡ್ನೇ ಇಕ್ಕಿದ್ದು ಸಾಕು! ಹೆಣ್ಣುಮಕ್ಕಳು ಎಷ್ಟೋದಿದ್ರು ಒಲೆಬೂದಿ ಎತ್ತೋದು ತಪ್ಪೋದಿಲ್ವಂತೆ. ನಮ್ಮೂರ್ ಚೆನ್ನೇಗೌಡ್ರ ಮಗ್ನೂ ಈ ಸುತ್ತಹಳ್ಳಿಯಲ್ಲಿ ಯಾರೂ ಓದ್ದೇ ಇರೋ ಅಷ್ಟೊ ಓದಿದ್ನಂತೆ ಅದ್ರೆ ಮೂರ್‍ನಾಲ್ಕು ವರ್ಷದಿಂದ ಅವನ್ನೇ ಇನ್ನೂ ಚಾಕ್ರೀನೆ ಸಿಕ್ಕಿಲ್ವಂತೆ. ಇನ್ನು ನನ್ನ ಮಗಳ ಓದ್ಸಿ ಏನಾಗ್ಬೇಕಾಗಿದೆ?" ಎಂದುಕೊಂಡು ನಾಗಿ ಸ್ಕೂಲಿಗೆ ಹೋಗುವುದನ್ನು ತಪ್ಪಿಸತೊಡಗಿದಳು.

ಓದುವ ವಯಸ್ಸಿನಲ್ಲಿ ಶಾಲೆ ಬಿಡಿಸಿ ತನ್ನ ಮಕ್ಕಳ ಜವಾಬ್ದಾರಿಯನ್ನು ತನ್ನ ಮಗಳ ಮೇಲೆ ಹೊರೆಸಿ, ಕೂಲಿಗೆ ಹೋಗುವ ತಾಯಿ ತನ್ನ ಮಗಳ ಭವಿಷ್ಯವನ್ನು ಹಾಳುಮಾಡುತ್ತಿದ್ದೇನೆ ಎಂಬುವುದನ್ನು ಯೋಚಿಸದೆ ಮೂರ್ಖ ನಿರ್ಧಾರವನ್ನು ತೆಗೆದುಕೊಂಡು, ಅವಳು ಓದುವುದಕ್ಕೆ ಓದಿರುವ ಮತ್ತೊಬ್ಬರನ್ನು ಹೋಲಿಕೆಮಾಡಿ ನೋಡುವುದು ಅನಾಗರೀಕತೆಯನ್ನು ತೋರುತ್ತದೆ. ಸರ್ಕಾರ ಶಿಕ್ಷಣದಿಂದ ಯಾರು ವಂಚಿತರಾಗಬಾರದು ಎಂದು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬೇಕಾದಷ್ಟು

ಹಣವ್ಯಯ ಮಾಡುತ್ತಿದ್ದರು. ಹಳ್ಳಿಗಾಡಿನ ಮಕ್ಕಳಿಗೆ ಅದು ತಲುಪುತ್ತಿಲ್ಲಾ ಓದುವ ತವಕವಿರುವ ಮಗು ತನ್ನ ಆಸೆಯನ್ನು ತನ್ನ ಒಡಲಲ್ಲಿ ಇಟ್ಟುಕೊಂಡು ನರಳುತ್ತದೆ. ತಾಯಿಯಾದವಳು ನಾವು ಪಡುವ ಕಷ್ಟವೇ ಸಾಕು. ನಮ್ಮ ಮಕ್ಕಳು ಕಷ್ಟಪಡಬಾರದು ಎಂದು ಜಾಗೃತಗೊಂಡರೆ ಪ್ರತಿಯೊಂದು ಕುಟುಂಬದ ಮಕ್ಕಳು ಶಿಕ್ಷಣದಿಂದ ವಂಚಿತರಾಗುವುದಿಲ್ಲ.

..........ಕೆಂಚವ್ವ ಅತ್ತ ಕೂಲಿಗೆ ಹೋದ ಮೇಲೆ ಇತ್ತ ಸ್ಕೂಲಿಗೆ ಐದಾರು ಹುಡುಗರು ಅವಳ ಮನೆಯ ಹತ್ತಿರ ಬಂದು ನಾಗಿಯನ್ನು 'ಮೇಷ್ಟ್ರು ಕರ್‍ಕೊಂಡ್ ಬಾ ಅಂದವ್ರೆ ಬಾ' ಎಂದು ಒತ್ತಾಯ ಮಾಡಿದರು. ಆಗ ನಾಗಿ ಆ ಹುಡುಗರಿಗೆ ನಮ್ಮವ್ವ ಸ್ಕೂಲಿಗೆ ಹೋಗ್ಬೇಡ ಅಂದವಳೆಂದೂ, ನಾಳೆ ನಮ್ಮವ್ವನಿಗೆ ಹೇಳಿಬಿಟ್ಟು ಬರ್‍ತೀನೆಂದೂ ಹೇಳಿದಳು. ಆದರೆ ಅವಳು ಎಷ್ಟೂ ಹೇಳಿದರೂ ಆ ಹುಡುಗರೂ ಕೇಳಲಿಲ್ಲ.

ಹಳ್ಳಿಯಲ್ಲಿ ಶಾಲೆಗೆ ಬರದಿದ್ದ ಮಕ್ಕಳನ್ನು ಅವರ ಮನೆಗೆ ಹೋಗಿ ಕರದುಕೊಂಡು ಬರುವ ವ್ಯವಸ್ಥೆಯಿದೆ. ಇದು ಮೆಚ್ಚುವಂತಹದು. ಆ ಮಕ್ಕಳು ಬಂದಾಗ ನಾಗಿ ಹೇಳುವ ಮಾತಿನ ಮುಗ್ಧತೆಯನ್ನು ಎಷ್ಟು ಚೆನ್ನಾಗಿ ಅಭಿವ್ಯಕ್ತಿಪಡಿಸಿದ್ದಾರೆ. ಆ ಒಂದು ಭಾಷಾ ಶೈಲಿ ಸೊಗಸಾಗಿ ಮುಡಿಬಂದಿದೆ. ಅಮ್ಮನ ಮಾತು ದೇವರ ವಾಕ್ಯವಿದ್ದಂತೆ. ಅದನ್ನು ಪಾಲಿಸುವಂತಹದು ಅಚ್ಚರಿಮೂಡಿಸುತ್ತದೆ. ಖಡಾಖಂಡಿತವಾಗಿ ಶಾಲೆಗೆ ಹೋಗುವುದು ಬೇಡವೆಂದರೂ, ಅವಳ ಮನದಲ್ಲಿ ಓದಬೇಕೆಂಬ ಹಂಬಲ ತುಡಿಯುತ್ತಿರುವುದನ್ನು ಕಾಣಬಹುದು. ಈ ರೀತಿಯಾಗಿ ಅರಳುತ್ತಿರುವ ಕುಸುಮಗಳನ್ನು ಮುದುಕಲು ಬಿಡದೆ ಅರಳುವಂತೆ ಪ್ರತಿಯೊಬ್ಬರು ಎಚ್ಚರಿಕೆ ವಹಿಸಬೇಕು.

ಶಾಲೆಗೆ ಬಾರದೆ ಇದ್ದ ಹುಡುಗಿಯನ್ನು ನಾಲ್ಕು ಜನ ಹುಡುಗರು ಅನಾಮತ್ತು ಹೊತ್ತುಕೊಂಡು ಹೋಗುವಾಗ ಅವಳ ದೇಹ ಭೂಮಿಗೆ ಕಕ್ಕುತ್ತಿತ್ತು. ಅವಳ ಕಿರುಚು ಮೇಲೆ ಮುಗಿಲು ಮುಟ್ಟುತ್ತಿತ್ತು. ನಾಗಿಯ ಹೊತ್ತುಕೊಂಡು ಹೊರಟಾಗ ಅವಳ ತಂಗಿಯರಾದ ಗೌರಿ, ರಾಜಿ ಇಬ್ಬರೂ ಒಂದೇ ಸಮನೇ ಗೋಳೋ ಎನ್ನುತ್ತಿದ್ದರು. ಅವಳನ್ನು ಉಪಾಧ್ಯಾಯರ ಬಳಿ ಬಿಟ್ಟು ಮತ್ತೆ ಆ ಹುಡುಗರು ಊರೊಳಕ್ಕೆ "ಮತ್ತ್ಯಾರು ಬಂದಿಲ್ಲ" ಎಂದು ನೆನಪಿಸಿಕೊಂಡು ಹೊರಟರು. ಊರಿನಲ್ಲಿ ಹೊಸದಾಗಿ ಪ್ರಾರಂಭವಾದ ಪ್ರೈಮರಿ ಶಾಲೆ ಸದ್ಯಕ್ಕೆ ಬೋರೇಗೌಡರ ಜಗುಲಿಯ ಮೇಲೆ ನಡೆಯುತ್ತಿತ್ತು. ಸರ್ಕಾರದ ಚೇರ್ಮನ್ ಶ್ರೀ ಬೋರೇಗೌಡರಿಗೆ, "ನಿಮ್ಮೂರಿನಲ್ಲಿ ಸ್ಕೂಲು ನಡೆಸಲು ತಕ್ಕನಾದ ಬಿಲ್ಡಿಂಗ್ ಇನ್ನೂ ಕಟ್ಟದೆ ಇರುವುದರಿಂದ ನಿಮ್ಮೂರಿಗೆ ಸ್ಕೂಲನ್ನು ಮಂಜೂರುಮಾಡಲು ಸಾಧ್ಯವಿಲ್ಲ" ಎಂದಾಗ ಬೋರೇಗೌಡರು "ನನ್ನ ಮನೆಯ

ಜಗುಲಿಯ ಮೇಲೆ ಸದ್ಯಕ್ಕೆ ಸ್ಕೂಲು ನಡೆಸುತ್ತೀನಿ ತಾವು ದಯಮಾಡಿ ನಮ್ಮೂರಿಗೆ ಸ್ಕೂಲನ್ನು ಕೊಡಲೇಬೇಕು... ನಮ್ಮೂರು ಮುನ್ನೂರು ಮನೆಗಳ ಗ್ರಾಮ".

ಇಲ್ಲಿ ಬೋರೇಗೌಡರು ತಮ್ಮ ಮಕ್ಕಳು ಶಿಕ್ಷಣ ಪಡೆಯಬೇಕು ಎಂದು ಸರ್ಕಾರದ ವಿರುದ್ಧ ಹೋರಾಡಿ ಸ್ಕೂಲನ್ನು ತಮ್ಮ ಜಗುಲಿಯ ಮೇಲೆ ಆರಂಭಿಸಿ ತನ್ನ ಉದಾತ್ತ ಗುಣದಿಂದ ಮೆರೆದಿದ್ದಾರೆ. ತಮ್ಮ ಕೆಲಸ ತಾವು ನೋಡಿಕೊಂಡು ಇರುವ ಕಾಲದಲ್ಲಿ ಹಳ್ಳಿಗಳ ಮಕ್ಕಳ ಹಿತದೃಷ್ಟಿಯಿಂದ ಸ್ವಂತ ಬಿಲ್ಡಿಂಗ್ ಇಲ್ಲದಿದ್ದರೂ ಕೂಡ ಸರ್ಕಾರಕ್ಕೆ ಸವಾಲು ಎಸಗಿ ಸೆಣಸಾಡಿದ ರೀತಿ ಅಚ್ಚರಿಗೊಳಿಸುವಂತಹದು. ಹೋರಾಡಿ ಶಾಲೆಯನ್ನು ತೆರೆಯುವುದು ಮುಖ್ಯವಲ್ಲ, ಆ ಶಾಲೆಯನ್ನು ಉಳಿಸಿಕೊಳ್ಳುವುದು ಅಲ್ಲಿನ ಜನರ ಕರ್ತವ್ಯವಾಗಿರುವುದರಿಂದ ಗರಿಷ್ಟ ಮಕ್ಕಳು ಶಾಲೆಯಲ್ಲಿ ದಾಖಲು ಆಗಬೇಕು. ಇಲ್ಲದಿದ್ದರೆ ಸ್ಕೂಲ್ ಮುಚ್ಚಲಾಗುತ್ತದೆ ಎಂದು, ಉಪಾಧ್ಯಾಯರು ಮನೆಮನೆಗೆ ಹೋಗಿ ಮಕ್ಕಳನ್ನು ಶಾಲೆಗೆ ಕರೆಯಲು ಕಳುಹಿಸಲಾಗಿತ್ತು. ಗುರುಗಳು ಜೊತೆಗೆ ಹಳ್ಳಿಯ ಕಾಳಜಿಯನ್ನು ವಹಿಸಿ ಶಾಲೆಗೆ ಕಳಿಸಿದರೆ ಶಾಲೆಯು ಉಳಿಯುತ್ತದೆ. ಮಕ್ಕಳಿಗೆ ಶಿಕ್ಷಣವು ದೊರೆಯುತ್ತದೆ. ಊರಿನ ಗೌಡರ ಜೊತೆಗೆ ಹಳ್ಳಿಯವರು ಶ್ರಮವಹಿಸಿ ದುಡಿಯಬೇಕು. ಆಗ ಹಳ್ಳಿಗಳು ಉದ್ಧಾರವಾಗುತ್ತದೆ. ಶೈಕ್ಷಣಿಕವಾಗಿಯೂ ಕೂಡ ಪ್ರಗತಿಹೊಂದುತ್ತದೆ.

ಊರಿನ ಜನರಲ್ಲಿ ಜಾಗೃತಗೊಳಿಸಲು ಗೌಡರು ಕೈಗೊಂಡ ಕಾರ್ಯ ಎಲ್ಲರನ್ನು ಅಚ್ಚರಿಗೊಳಿಸುತ್ತದೆ. ಗೌಡರು ಉಪಾಧ್ಯಾಯರು ಊರೊಳಗೆ ಎಲ್ಲರ ಮನೆಯ ಹತ್ತಿರವೂ ಐದಾರು ಬಾರಿ ಹೋಗಿ ಹೇಳಿದರೂ ಕಲಿಸ್ತಿಲ್ವಂತೆ?" ಎಂದು ಹೇಳಿದರು. ಸುಗ್ಗಯ್ಯ "ಮನೇಲಿ ಕುರಿ ಕಾಯೋರು ಯಾರು ಇಲ್ಲ" ಎಂದ. ಗೌಡರು ರೇಗಿ "ನೀನೆ ಹೋಗ್ಲ ಕಾಯಕೆ ಮೊದ್ಲು. ನಾಳೆಯಿಂದ ನಮಗನ್ನ ಸ್ಕೂಲಿಗೆ ಕಳಿಸುಸ... ಗೊತ್ತಾಯ್ತ?" ಮುಂದೆ ಬಂದರು. ಮನೆಯ ಹತ್ತಿರ ನಿಂತಿದ್ದ ಕೆಂಪಣ್ಣ ಗೌಡರ ಕಣ್ಣಿಗೆ ಬಿದ್ದ "ಯಾಕ್ಲ ಕೆಂಪ ಮಗಳ ಸ್ಕೂಲ್ಗೇ ಹೋಗ್ಬೇಡ ಅಂದಂತೆ" ಎಂದು ಕೇಳಿದಾಗ 'ಹೆಣ್ ಹೈದ್ಲು ಓದೋದ್ದಷ್ಟರಲ್ಲೇ ಅದೆ ಬಿಡಿ, ಹೊಲ್ದತ್ರಕ್ಕೆ ಹಿಟ್ ತರೋರ್‍ಯಾರು ಇಲ್ಲ. ನಾನೊಬ್ಬಂಟಿ ಅದ್ಕೆ" ಎಂದಾಗ "ಥೂ ಬೇಕುಪ್ಪ ಓದಕ್ಕೆ ಹೆಣ್ಣಾದ್ರೇನು? ಗಂಡಾದ್ರೇನ್ಲ? ವಿದ್ಯೆ ಕಲಿಲಿ, ಮೊದ್ಲು ನಾಳೆಯಿಂದ ಆ ಹುಡುಗಿಯ ಸ್ಕೂಲ್ಗೆ ಕಳ್ಸು" ಎಂದು ಹೇಳಿ ನಡೆಯುತ್ತಾರೆ.

ಈ ಕತೆಯನ್ನು ಓದಿದಾಗ ಡಾ. ಕರೀಗೌಡರು ಬೋರೇಗೌಡರ ಮೂಲಕ ಶಿಕ್ಷಣ ಜಾಗೃತಿ ಮೂಡಿಸುವ ಪ್ರಯತ್ನವನ್ನುಮಾಡುತ್ತಿದ್ದಾರೆ ಎನಿಸುತ್ತದೆ. ನಗರ ಪ್ರದೇಶ-ದಲ್ಲಾದರೆ ಪೇಪರ್, ಟಿವಿ ಮುಖಾಂತರ ತಮ್ಮ ಶಾಲೆಯ ಅಭಿವೃದ್ಧಿಗಾಗಿ ಜಾಹಿರಾತು ಪ್ರಕಟಿಸುತ್ತಾರೆ. ಹಳ್ಳಿಗಳಲ್ಲಿ ಅನಕ್ಷರತೆಯಿರುವ ಕಾರಣದಿಂದಾಗಿ ಮನೆ ಮನೆಗೆ ಹೋಗಿ

ಪ್ರತಿಯೊಬ್ಬರನ್ನು ಎಚ್ಚರಿಸುತ್ತವೆ. ಶಾಲಾ ಅಭಿವೃದ್ಧಿಗಾಗಿ ದುಡಿಯುತ್ತಾರೆ. ಅವರು ಒಂದಲ್ಲ ಒಂದು ಕಾರಣ ಕೊಡುತ್ತಾರೆ. ಏಕೆಂದರೆ ದನಕರುಗಳನ್ನು ಮೇಯಿಸಲು, ಹೊಲಕ್ಕೆ ಊಟ ತೆಗೆದುಕೊಂಡು ಹೋಗಬೇಕಾದ ಕಾರಣದಿಂದ ಸರಿಯಾಗಿ ಶಾಲೆಗೆ ಬರಲಾಗುವುದಿಲ್ಲ ಎಂದು ಹೇಳುತ್ತಾರೆ. ಗ್ರಾಮೀಣ ಜನರ ದೃಷ್ಟಿಯಲ್ಲಿ ಶಾಲೆಗೆ ಕಳಿಸುವ ಅವಶ್ಯಕತೆಯಿರುವುದಿಲ್ಲ, ಅಲ್ಲದೆ ಹೆಣ್ಣು ದಿಕ್ಕು ಇಲ್ಲದ ಮನೆಯಲ್ಲಿ ಅಡುಗೆ ಮಾಡಿ ಊಟ ತೆಗೆದುಕೊಂಡು ಬರುವುದಕ್ಕಾಗಿ ಬಳಸಿಕೊಳ್ಳುತ್ತಾರೆ. ಇಷ್ಟೆಲ್ಲಾ ತಿಳುವಳಿಕೆ ಹೇಳಿದವರು ಹಳ್ಳಿಯ ಮಂದಿ ಅರ್ಥವಾಗುವುದಿಲ್ಲ. ನಮ್ಮೂರಿನ ಜನರು ವಿದ್ಯಾವಂತರಾಗಲಿ ಅಂಥ ಸರ್ಕಾರದ ಜೊತೆ ಹೋರಾಟ ಮಾಡಿ ಊರಿಗೆ ಸ್ಕೂಲು ಮಂಜೂರು ಮಾಡಿಸಿದ್ದರು. ನಮ್ಮೂರಿನ ಜನಗಳ ಯೋಚನೆಯು ಯಾವ ಮಟ್ಟದ್ದು ಎಂದು ತಿಳಿಯಲು ಸಾಧ್ಯವಿಲ್ಲ. ನಿಮಗಿಷ್ಟ ಬಂದಾಗ ಮಾಡಿ ಎಂದು ಹೇಳಿ ಗೌಡರು ಕೈಬಿಟ್ಟರು. ಅಲ್ಲಿ ಶಿಕ್ಷಕರು ಸ್ಕೂಲಿಗೆ ಮಕ್ಕಳು ಬರುವಂತೆ ಮಾಡಲು ಅರಸಾಹಸ ಮಾಡಬೇಕಾಗಿತ್ತು. ಶಾಲೆಯಲ್ಲಿ ಮಕ್ಕಳಿಗೆ ವಿವಿಧ ರೀತಿಯ ದಂಡನೆ ನೀಡಿದರು. ದೊಡ್ಡವರು ಮಾಡುವ ತಪ್ಪಿಗೆ ಈ ಮಕ್ಕಳು ಗುರಿಯಾಗುತ್ತಾರೆ. ಎಷ್ಟೇ ಶಿಕ್ಷೆಯನ್ನು ಕೊಟ್ಟರು ಅದು ನಿಷ್ಪ್ರಯೋಜಕ ಎಂದು ತಿಳಿದು, ಗುರುಗಳು ಘೋರ ಶಿಕ್ಷೆ ಕೊಟ್ಟ ಕಾರಣದಿಂದಾಗಿ ನಾಗಿಯ ಅವ್ವನಿಂದ ಬೈಯಿಸಿಕೊಂಡು ಅವಳ ಬಾಯಿಗೆ ಹೆದರಿದರು. ಈಕೆ ಬೈಯಲು ಕಾರಣವಿತ್ತು. ನಾಗಿ ತಂಗಿಯರು ಬೀದಿಯಲ್ಲಿ ಬಿದ್ದು ಅಳುತ್ತಿದ್ದು ಯಾರು ದಿಕ್ಕಿಲ್ಲದೆ ಅನಾಥವಾಗಿರವುದನ್ನು ಕಂಡು ಜೋರು ಮಾಡುತ್ತಾಳೆ. ಗುರುಗಳು ಮಕ್ಕಳಿಗೆ ಶಿಕ್ಷೆ ಕೊಡುವುದೇ ಮುಖ್ಯ ಉದ್ದೇಶವಾಗಬಾರದು. ಮನೆಯ ಸನ್ನಿವೇಶವನ್ನು ನಾವು ಅರಿಯಬೇಕು. ಗುರುಗಳ ಹೋರಾಟವನ್ನು ಪೋಷಕರು ಕೂಡ ಅರ್ಥಮಾಡಿ-ಕೊಳ್ಳಬೇಕು. ಎರಡು ಕಡೆಯಿಂದ ಸಹಕಾರವಿದ್ದಾಗ ಮಾತ್ರ ಶಾಲೆ ಸುಲಲಿತವಾಗಿ ನಡೆಯಲು ಸಾಧ್ಯ.

"**ಸಂಗಾತಿಗಳು**' ಚೆನ್ನಯ್ಯ ನಂಜವ್ವ ಮಗ ದುರ್ಗದ ಪ್ರೌಢಶಾಲೆಯಲ್ಲಿ ಆ ಸಾರಿ ಪರೀಕ್ಷೆಗೆ ಕೂತಿದ್ದು ಅವರಲ್ಲಿ ನಾಲ್ವರು ಮಾತ್ರ ಪಾಸಾಗಿದ್ದರು. ಅವರಲ್ಲಿ ಚೆನ್ನಯ್ಯ ಮಗ ರಾಜಣ್ಣನೂ ಒಬ್ಬನಾಗಿದ್ದ. ನಂಜವ್ವ ತನ್ನ ಮಗನಿಗೆ ಹೇಳಿದಳು. "ನಮ್ಮೂರ ರಾಮಪ್ಪ ಪುಟ್ಟಣ್ಣ ಬೋರೇಗೌಡ ಎಲ್ಲ ನಿನ್ನಷ್ಟೆಯಂತೆ ಓದಿರೋದು ನೀನು ಅವ್ರಂಗೆ ಒಂದು ಮೇಷ್ಟ್ರು ಕೆಲಸ ಮಾಡ್ಕೋ ಮೇಷ್ಟ್ರಾಗಿ ಅವರೇನು ಹೆಂಡ್ತಿ ಮಕ್ಕಳ ಸಾಕ್ತಾ ಇಲ್ವಾ? ಚೆನ್ನಾಗೇ ಅವ್ರೆ! ನಾವಿರೋ ಸ್ಥಿತೀಲಿ ನಿನ್ನ ಮುಂದ್ಕೆ ಓದಕ್ಕೆ ಕಳಿಸ್ಬಿಟ್ಟು ಕಷ್ಟದಲ್ಲಿ ಬ್ಯಾಡ ಅಂದ್ರೆ ಹೇಗೆ? ಹೇಳು" ಎಂದು ರಾಜಣ್ಣ "ಇಲ್ಲ ಕಣವ್ವ ನಾನು ಮುಂದಕ್ಕೆ ಓದಲೇಬೇಕು ನಾನು ಬಿ.ಎ. ವರೆಗೂ ಓದಲೇಬೇಕು" ಎಂದ.

ಗ್ರಾಮೀಣ ಪ್ರದೇಶದ ಮಕ್ಕಳು ಎಸ್.ಎಸ್.ಎಲ್.ಸಿ. ಪಾಸಾಗುವುದೇ ಒಂದು ಮಹತ್ವದ ಸಾಧನೆ. ಹೇಗೂ ನನ್ನ ಮಗನಿಗೆ ಒಂದು ಮೇಷ್ಟ್ರು ಕೆಲಸ ಸಿಕ್ಕರೆ ಸಾಕು ಎಂದು ತೃಪ್ತಿಪಡುವ ತಂದೆ ತಾಯಿಗಳಿಗೆ ಮುಂದೆ ಓದಬೇಕು ಎಂದು ಹಂಬಲಿಸುವ ಮಕ್ಕಳು ಇರುವುದನ್ನು ಕಾಣಬಹುದಾಗಿದೆ. ಹೇಗೂ ಈ ಕಷ್ಟದಲ್ಲಿ ಪಾಸಾದನಲ್ಲ ಒಂದು ಕೆಲಸ ಪಡೆದು ಜೀವನ ಸಾಗಿಸಬೇಕು ಎಂಬ ಭಾವನೆಯಿಲ್ಲದೆ ಮುಂದೆ ಹೆಚ್ಚು ಶಿಕ್ಷಣ ಪಡೆದು ಕೆಲಸವನ್ನು ತೆಗೆದುಕೊಳ್ಳಬೇಕೆಂಬುದು ಮೆಚ್ಚುವಂತದೆ. ಈ ರೀತಿಯ ಮಕ್ಕಳ ಬಗ್ಗೆ ತಂದೆ ತಾಯಿಯು ಹೆಮ್ಮೆ ಪಡುವಂತದ್ದು.

ಅವನ ನಿರ್ಧಾರವನ್ನು ಸ್ವಾಗತಿಸಿದ ತಂದೆತಾಯಿಗಳು ನಾವು ಎಷ್ಟೇ ಕಷ್ಟಪಟ್ಟರೂ ಪರವಾಗಿಲ್ಲ ನಮಗೆ ಸಿಗದ ಸುಖ ನಮ್ಮ ಮಕ್ಕಳಿಗಾದರೂ ಸಿಗಲಿ ಎಂಬ ಭಾವನೆಯಿಂದ ಸಾಲ ಕೊಡುವವರು ಇರುವಾಗ ಏಕೆ ಚಿಂತಿಸಬೇಕು ಎಂದು ನಿರ್ಧರಿಸಿದರು. ಈ ರೀತಿಯ ಮನಸ್ಸು ಎಲ್ಲ ತಂದೆತಾಯಂದಿರಲ್ಲಿ ಕಂಡುಬರುವುದಿಲ್ಲ. ಮಗನ ಕುತೂಹಲಕ್ಕೆ ತಣ್ಣೀರೆರಚದೆ ಪ್ರೋತ್ಸಾಯಿಸುವ ತಂದೆ ತಾಯಿಗಳು ಎಲ್ಲ ಹಳ್ಳಿಗಳಲ್ಲೂ ಇದ್ದಾರೆ. ಹಳ್ಳಿಯಲ್ಲಿ ಅನಕ್ಷರಸ್ಥರೇ ಇರುವುದಿಲ್ಲ. ಅಂಧಾಕಾರ ದೂರವಾಗಿ ಎಲ್ಲೆಲ್ಲೋ ಜ್ಞಾನದ ಜ್ಯೋತಿಯು ಪ್ರಜ್ವಲಿಸುತ್ತದೆ. ಶೈಕ್ಷಣಿಕ ಪ್ರಗತಿಗಾಗಿ ಹಿರಿಯರು ನಡೆಸಿದ ಹೋರಾಟವು ಸಾರ್ಥಕವಾಗುತ್ತದೆ.

ಚೆನ್ನಯ್ಯ ಹೊಸಳ್ಳಿ ಮಹದೇವಪ್ಪನ ಹೊಟೇಲ್‌ನಲ್ಲಿ ಕಾಫಿ ಕುಡಿಯುತ್ತಾ ಕೂತಿದ್ದಾಗ ಮಹದೇವಪ್ಪ 'ಏನ್ ಚೆನ್ನಯ್ಯ ನಿನ್ ಮಗ ಒಂದೇ ಸಾರಿಗೆ ಎಸ್.ಎಸ್.ಎಲ್.ಸಿ ಯಲ್ಲಿ ಗೆಟನ್ ಆಗ್ ಬಿಟ್ಟವ್ನಂತಲ್ಲ. ಪರ್ವಾಗಿಲ್ಲ ಕಣಯ್ಯ ನಿನ್ನ ಮಗ ತುಂಬಾ ಬುದ್ಧಿವಂತ ಅಂತ ಕಾಣಿಸ್ತದ. ಎಂತೆಂತರೋ ವಿದ್ಯಾವಂತರ ಮಕ್ಕಳೆಲ್ಲಾ ಉರುಳೋಗ್ಬಿಟ್ಟವ್ರೆ' ಎಂದಾಗ ಚೆನ್ನಯ್ಯನಿಗೆ ತನ್ನ ಮಗನ ಮೇಳೆ ಮಮತೆ, ಅಭಿಮಾನ ಮೂಡಿತ್ತು. ಆದ್ದರಿಂದ ಚೆನ್ನಯ್ಯ ತನಗಾದ ಸಂತೋಷವನ್ನು ತನ್ನೊಳಗೆ ಅನುಭವಿಸಿದ್ದ. ಅನ್ಯರು ತನ್ನ ಮಗನ ಬಗ್ಗೆ ಹೆಮ್ಮೆಯ ಮಾತನ್ನು ಆಡಿದಾಗ ಅವನ ಸಂತೋಷಕ್ಕೆ ಪಾರವೇ ಇಲ್ಲ. ಹೆತ್ತ ತಂದೆತಾಯಿಗೆ ಇದಕ್ಕಿಂತ ಇನ್ನೇನುಬೇಕು. ಓದುವ ಹುಡುಗರು ಹಳ್ಳಿಗೆ ಆಸ್ತಿ ಅವನು ಏನಾದರೂ ದೊಡ್ಡ ಆಫೀಸರ್ ಆದರೆ ಅವನು ಊರಿನ ಕಿರೀಟವಿದ್ದಂತೆ.

ಒಂದು ಮಗು ದೊಡ್ಡ ವಿದ್ಯಾವಂತನಾಗಬೇಕು, ಒಳ್ಳೆಯ ಕೆಲಸಕ್ಕೆ ಹೋಗಬೇಕೆಂದರೆ ಅದಕ್ಕೆ ಆದರ್ಶವಾಗಿ ಮತ್ತೊಬ್ಬರು ಇರಬೇಕು. ಅವನನ್ನು ನೋಡಿ ಕಲಿತುಕೊಳ್ಳುವುದು ಬಹಳವಿರುತ್ತದೆ. ಎಸ್.ಎಸ್.ಎಲ್.ಸಿ. ಪಾಸಾದರೆ ಮೇಷ್ಟ್ರು ಆದರೆ ಬಿ.ಎ. ಓದಿ ಡೆಪ್ಯುಟಿ ಕಮೀಷನರ್ ಆಗಬೇಕೆಂಬ ಛಲ ಹಳ್ಳಿಗಾಡಿನ ಮಕ್ಕಳಲ್ಲಿ ಇರುವುದು ಅಭಿನಂದನಾಪೂರ್ಣವಾದದು. ಬಡತನ ನೋವನ್ನು ಕಂಡು ಉಂಡು

ಅನುಭವಿಸಿರುವುದರಿಂದ ಇದರಿಂದ ಮುಕ್ತಿ ಪಡಯಬೇಕಾದರೆ ನಾನು ದೊಡ್ಡ ಅಧಿಕಾರಿಯಾಗಬೇಕು ಎಂಬ ಆಕಾಂಕ್ಷೆಯನ್ನು ಹೊಂದಿರುವ ಹಳ್ಳಿಗಾಡಿನ ಮಗುವಿನ ಆಸೆಯನ್ನು ಸ್ವಾಗತಿಸಬೇಕು. ಈ ರೀತಿ ಛಲ, ಗುರಿಯನ್ನು ಮುಟ್ಟಲು ಸತತ ಪ್ರಯತ್ನವನ್ನು ಮಾಡಬೇಕು ಯಾವುದೇ ಕಾರಣದಿಂದ ಪ್ರಯತ್ನವನ್ನು ನಾವು ಕೈಬಿಡಬಾರದು. ಸತತ ಪ್ರಯತ್ನ ಮಾಡಿದಾಗ ಫಲ ದೊರೆಯುವುದರಲ್ಲಿ ಯಾವ ಸಂದೇಹವಿಲ್ಲ. ಈ ಸಾಧನೆಯು ಯಶಸ್ಸಿಗೆ ಮಗುವಿನ ತಂದೆ ತಾಯಿಯ ಸಹಕಾರ ಬಹಳ ಮುಖ್ಯವಾಗಿರುತ್ತದೆ.

ಈ ಕತೆಯಲ್ಲಿ ಚೆನ್ನಯ್ಯನ ಪಾತ್ರ ಬಹಳ ಮಹತ್ವವುಳ್ಳದ್ದು. ಏಕೆಂದರೆ ತನ್ನ ನಾಲ್ವರು ಗಂಡು ಮಕ್ಕಳಲ್ಲಿ ಇಬ್ಬರನ್ನು ವಿದ್ಯಾವಂತರನ್ನಾಗಿ ಮಾಡಬೇಕು ಎಂಬ ದೃಢ ನಿರ್ಧಾರಕ್ಕೆ ಬಂದ. ಅದಕ್ಕೆ ಎಷ್ಟೇ ಖರ್ಚಾಗಲಿ; ತಾನು ಎಷ್ಟೇ ಕಷ್ಟ ಬೀಳಲಿ ತನ್ನಿಬ್ಬರು ಮಕ್ಕಳು ವಿದ್ಯಾವಂತರಾದರೇ ಸಾಕು. ತಾನು ಬಡತನದಲ್ಲೇ ಇರಬಹುದು; ತಮಗಿಂತಲೂ ಉತ್ತಮವಲ್ಲದ ಕುಟುಂಬಗಳು ತಮ್ಮೂರಿನಲ್ಲಿದ್ದು ಜೀವನ ನಡೆಸುತ್ತಿಲ್ವೆ? ಬಡತನ, ಸಿರಿತನ ಅವೆಲ್ಲಾ ಬಾಳಿನಲ್ಲಿದ್ದಿದ್ದೇ ಇದ್ದುದರಲ್ಲಿ ತನ್ನ ಕುಟುಂಬ ತನ್ನೂರಿನ ಕುಟುಂಬಗಳ ಮುಂದೆ ಹೋಲಿಸಿದಾಗ ಎಷ್ಟೋ ಪಾಲು ಮೇಲಲ್ಲವೇ? ಎಲ್ಲಾ ಅಲ್ಲಿಗಲ್ಲಿಗೆ ನೇರವಾಗಿ ನಡೆದುಕೊಂಡು ಹೋಗುತ್ತದೆ ಎಂದು ಆಲೋಚಿಸಿ, ನಿಶ್ಚಯಿಸಿಕೊಂಡಿದೆ.

ಗ್ರಾಮಾಂತರ ಪ್ರದೇಶಗಳಲ್ಲಿ ವ್ಯವಸಾಯವೇ ಪ್ರಧಾನ ಉದ್ಯೋಗವಾದ್ದರಿಂದ ತಾವು ಮಾಡುವುದರ ಜೊತೆಗೆ ತಮ್ಮ ಮಕ್ಕಳು ಅದೇ ಕೆಲಸವನ್ನು ಮಾಡಲಿ ಎಂದು ಹೇಳಿ ಮಕ್ಕಳನ್ನು ಶಾಲೆಗೆ ಕಳುಹಿಸದೆ, ಹೊಲ ಮನೆಯ ಕೆಲಸಕ್ಕೆ ಹಾಕಿಕೊಂಡಿರುವ ಎಷ್ಟು ತಂದೆ ತಾಯಿಯನ್ನು ಕಾಣಬಹುದು. ಚೆನ್ನಯ್ಯ ಅದಕ್ಕೆ ವಿರುದ್ಧವಾದ ವ್ಯಕ್ತಿ ತಮ್ಮ ಕಷ್ಟ ನಮಗೆ ಇರಲಿ ಮಕ್ಕಳು ಓದಲಿ ಎಂಬ ಮಹತ್ವಾಕಾಂಕ್ಷೆಯನ್ನು ಇಟ್ಟುಕೊಂಡಿರುವಂತವನು. ಇವನಲ್ಲಿ ಇರುವ ಶೈಕ್ಷಣಿಕ ಪ್ರಜ್ಞೆಯ ಮುಂದೆ ನಗರವಾಸಿಗಳು ನಾಚಬೇಕು ಎಂಬಂತೆ ಕರೀಗೌಡರು ಈ ಪಾತ್ರವನ್ನು ಚಿತ್ರಿಸಿದ್ದಾರೆ. ಹಳ್ಳಿಯ ಈ ಜೀವನ ನಮಗೆ ಸಾಕು· ನಮ್ಮ ಮಕ್ಕಳಿಗೆ ಈ ಬಡತನ ನೋವು ಬೇಡ ಎಂದು ನಿರ್ಧರಿಸಿರುವುದು ಮೆಚ್ಚುವಂತಹದು.

ಮಕ್ಕಳ ಮುಂದಿನ ವ್ಯಾಸಂಗಕ್ಕೆ ಬೆಂಗಳೂರು ಮೈಸೂರು ಮುಂತಾದ ಪಟ್ಟಣಗಳಿಗೆ ಕಳಿಸಬೇಕಾದುದರಿಂದ ಅಲ್ಲಿ ಯಾರಾದರೂ ಸಂಬಂಧಿಕರು ಇದ್ದರೆ ಅನುಕೂಲವಾಗುತ್ತದೆ ಎಂದು ಯೋಚಿಸುವ ತಂದೆ ತಾಯಿಗೆ ಯಾರು ಇಲ್ಲವೆಂದೂ ತಿಳಿದಾಗ ದಿಕ್ಕುತೋಚದಾಗ ಮುಂದೆ ಏನು ಮಾಡುವುದು ಎಂದು ಯೋಚಿಸುತ್ತಾರೆ.

ತಕ್ಷಣ ಸಿದ್ನೀರ್ ಪೀಶ್ಕ್ ಸೇರಿಸಬಹುದು ಎಂದು ಪುಟ್ಟಣ್ಣ ಊರಿಗ್ ಬಂದವ್ರಂತೆ ಯಾವುದಕ್ಕೂ ಅವ್ರನ್ನ್ ಕೇಳ್ ನೋಡು ಗೊತ್ತಾಗದೆ ಹೇಳ್ತಾರೆ ಎಂದಳು.

ಆದರೆ ಈ ಮಗುವಿಗೆ ಧರ್ಮ ಪೀಠದ ಬಗ್ಗೆ ಮೊದಲು ತಿಳಿದಿತು. ಅಲ್ಲಿ ಮೇಲು ಕೀಳು ಎಂಬ ಭಾವನೆಯನ್ನು ಪರಿಪಾಲಿಸುವುದು. ಅಲ್ಲಿ ಬಡ ವಿದ್ಯಾರ್ಥಿಗಳಿಗೆ ಕಾಲಕಾಲಕ್ಕೆ ಸರಿಯಾಗಿ ಊಟ, ನಿದ್ದೆ, ಸ್ನಾನ, ಔಷಧಿಗಳ ಉಪಚಾರವಿಲ್ಲದೆ ಕಜ್ಜಿರೋಗ ಬಂದು ನರಳುತ್ತಿರುವುದನ್ನು ಕೇಳಿದ. ಆದ್ದರಿಂದ ಆ ಪೀಠವನ್ನು ನಿರಾಕರಿಸುತ್ತಾನೆ. ಬಡಮಕ್ಕಳಿಗೆ ಆಶ್ರಯವಾಗಬೇಕಾದ ಈ ಪೀಠ ಬೆಳೆಯುವ ಕುಡಿಯಲ್ಲೆ ಮೇಲ್ ಕೀಳು ಎಂಬ ಭಾವನೆ ಹುಟ್ಟು ಹಾಕುತ್ತಾರೆ. ಮಕ್ಕಳ ಆರೋಗ್ಯದ ಕಡೆ ಗಮನ ಹರಿಸದೆ ಅನೇಕ ರೋಗಗಳಿಗೆ ತುತ್ತಾಗುತ್ತಿರುವುದನ್ನು ನಾವು ಕಾಣಬಹುದಾಗಿ. ಜೊತೆಗೆ ಸಂಸ್ಕೃತ ಶ್ಲೋಕಗಳನ್ನು ಬೆಳಿಗ್ಗೆ ಗಟ್ಟಿ ಮಾಡಬೇಕಾದ್ದು ಹಿಂಸೆಯ ವಿಷಯವಾಗಿತ್ತು. ಓದಬೇಕು ಎಂಬ ಆಸೆ ಹೊತ್ತಿದ್ದ ಆ ಮಗುವಿಗೆ ಈ ಪೀಠ ಎಂದರೆ ಓದುವುದೇ ಬೇಡ ಎಂಬ ತೀರ್ಮಾನಕ್ಕೆ ಬರುತ್ತದೆ ಎಂದರೆ ಅ ಪೀಠದ ಕೃತ್ಯಗಳನ್ನು ಹೇಳತೀರದು.

ಈಗ ವಿದ್ಯಾಪೀಠಗಳ ಹೆಸರನ್ನು ಹೇಳಿಕೊಂಡು ಹಗಲು ದರೋಡೆ ಮಾಡುವುದನ್ನು ಕಾಣಬಹುದು. ಇದಕ್ಕೆ ಕೊಡುವ ದೇಣಿಗೆಯನ್ನು ತಮ್ಮ ಸ್ವಂತ ಕೆಲಸಕ್ಕೆ ಬಳಸಿಕೊಳ್ಳುವ ಸ್ವಾರ್ಥಿಗಳೇ ಹೆಚ್ಚಾಗಿ ತುಂಬಿಕೊಂಡಿದ್ದಾರೆ. ಈ ಅನ್ಯಾಯಗಳು ಚಿಕ್ಕ ಮಕ್ಕಳವರೆಗೂ ತಲುಪಿತು. ಎಲ್ಲರೂ ಕೂಡ ಧರ್ಮ ಹೆಸರಿನ ಆಗಬಾರದ ಅನ್ಯಾಯಗಳಾಗುತ್ತದೆ. ಧರ್ಮ ಎಂಬುದು ಇಂದಿನ ರಾಜಕೀಯ ಕ್ಷೇತ್ರದಲ್ಲಿ ಬಹಳ ಮಹತ್ವ ಪೂರ್ಣ ಪಾತ್ರವನ್ನು ವಹಿಸುತ್ತದೆ. ಧರ್ಮಗುರು ಎಂದು ಮುಖವಾಡ ಹಾಕಿಕೊಂಡು ದೇಶದ್ರೋಹ, ಅತ್ಯಾಚಾರ ಮಾಡುವವರನ್ನು ದಿನನಿತ್ಯ ಟಿ.ವಿಯಲ್ಲಿ ಕಾಣಬಹುದಾಗಿದೆ. ಈ ಅನ್ಯಾಯ ಮೋಸ ದರೋಡೆಗಳು ಕಡಿಮೆ ಆದರೆ ಮಾತ್ರ ಸಮಾಜ ಜನತೆ ಉದ್ಧಾರವಾಗಲೂ ಸಾಧ್ಯ. ಆಧುನಿಕ ಜಗತ್ತಿನ ಜನರು ಎಷ್ಟು ಜಾಗೃತಗೊಂಡು ಎಲ್ಲಾ ವಿಷಯಗಳನ್ನು ಹೇಗೆ ತಿಳಿದುಕೊಂಡಿದ್ದಾರೆ ಎಂಬುದು ಮಹತ್ವದ್ದಾಗಿದೆ.

ಅಬ್ದುಲ್ ಅಜೀದ್‌ಸಾಬರಿಗೆ ಚೆನ್ನಯ್ಯನಿಗೆ ಅಪಾರವಾದ ಆತ್ಮೀಯತೆ ಇರುವುದನ್ನು ನಾವು ಕಾಣಬಹುದು ಇಲ್ಲಿ ಯಾವುದೇ ರೀತಿಯ ಜಾತಿಬೇಧವನ್ನು ನಾವು ಕಾಣುವುದಿಲ್ಲ. ಹಳ್ಳಿಯೆಂದರೆ ಜಾತಿ ವಿವಾದ ಹೆಚ್ಚಾಗಿ ಕಂಡುಬರುವ ಕಾಲದಲ್ಲಿ ಜಾತೀಯತೆ ಮೆಟ್ಟಿ ನಿಂತ ಮಂದಿಯನ್ನು ನಾವು ಕಾಣಬಹುದಾಗಿದೆ. ಅಬ್ದುಲ್ ಚೆನ್ನಯ್ಯನಿಗೆ ನಿನ್ನ ಮಗನ ರಿಸಲ್ಟ್ ಬಂದ ತಕ್ಷಣ ಕಾಗದ ಬರಿ ಚೆನ್ನಯ್ಯ ಅವ್ನು ಪಾಸಾದ್ನೂ, ಫೇಲಾದ್ರೂ ಎಂಬುದಕ್ಕೆ ಪಾಸಾದರೆ ಮುಂದಕ್ಕೆ ಓದಿಸು, ಬಿಡಿಸಬೇಡ

ಯಾವುದಕ್ಕೂ ನನಗೆ ಕಾಗದ ಬರಿ ಬರೀದೆ ಹೋದಿ....." ಎಂದು ಹೇಳಿ ಹೋಗಿದ್ದರು. ಇದು ಚೆನ್ನಯ್ಯನಿಗೆ ನೆನಪಿಗೆ ಬಂದದ್ದೇ ತಡ ಅವನಿಗೆ ಯಾವುದೋ ನಿಧಿಯೇ ಸಿಕ್ಕಂತಾಗಿ ಬಿಟ್ಟು "ಛೇ! ಎಂದು ತನ್ನ ಹೆಂಡತಿಯನ್ನು ಕೂಗಿಕೊಂಡಿದ್ದನ್ನು ಕಾಣಬಹುದು. 'ಆಪತ್ತಿಗಾದವನೇ ನೆಂಟ' ಎಂಬಂತೆ ಮಗನನ್ನು ಓದಿಸುವುದಕ್ಕೆ ದಾರಿಕಾಣದಂತಾಗಿದ್ದಾಗ ಮುಸ್ಲಿಂ ಮೇಷ್ಟ್ರು ಬಂದಿದ್ದ ಚಿನ್ನದ ಗಣಿಯ ಸಿಕ್ಕಂತೆ ಆಯಿತು.

ರೈತನಾದ ಚೆನ್ನಯ್ಯ ಅಬ್ದುಲ್ ಮೇಷ್ಟ್ರು ಬಹಳ ಆತ್ಮೀಯರಾಗಿದ್ದರೂ. 'ಜಾತಿಗೆ ಜಾತಿ ವೈರಿ ನೀರಿಗೆ ಪಾಚಿ ವೈರಿ' ಎಂಬಂತೆ ಹಿಂದೂ ಮುಸ್ಲಿಮರಾದರೂ ಇವರು ಒಂದೇ ಮನೆಯ ಜನರಂತೆ ಇದ್ದಾರೆ. ಈ ಸಂದರ್ಭದಲ್ಲಿ ಅವರ ನೆನಪು ಬಂದಿದ್ದು ಮಗನ ಭವಿಷ್ಯಕ್ಕೆ ದೀವಿಗೆ ದೊರೆತಂತೆ ಆಯಿತು. ಈ ಮೇಷ್ಟ್ರು ಇರುವಾಗ ಅವರು ಬೇರೆಯವರ ಬಗ್ಗೆ ಯೋಚ್ನೆ ಮಾಡಿ ತಲೆಕೆಡಿಸಿಕೊಳ್ಳುವುದೇ ಬೇಡ ಎಂದು ನಿರ್ಧರಿಸಿದರು. ಈ ಆಲೋಚನೆ ಬಂದ ಮೇಲೆ ಕಾತುರತೆಯಿಂದ ತನ್ನ ಮಗನಿಗೆ ಮಾರ್ಕ್ಸ್‌ಕಾರ್ಡ್ ರೆಡಿಮಾಡಿಕೊಳ್ಳುವಂತೆ ಹೇಳಿದ್ದು. ರಾತ್ರಿ ಪೂರ್ತಿ ಇದೇ ಕಾತುರದಿಂದ ಹೊರಳಾಡಿದನು ನಿದ್ದೆ ಕಣ್ಣಿಗೆ ಹತ್ತಲಿಲ್ಲ. ಹೀಗೆ ಮನುಷ್ಯನಿಗೆ ಯಾವುದೇ ವಿಚಾರ ತಲೆಯೊಳಕ್ಕೆ ಹೋಗದೆ ನಿದ್ದೆ ಹತ್ತದೆ ಒದ್ದಾಡುತ್ತಾರೆ. ಮಗನನ್ನು ಹೇಗಾದರೂ ಮಾಡಿ ಓದಿಸಬೇಕು ತವಕ ಮನದಾಳದಲ್ಲಿತ್ತು.

"ರೋಗಿ ಬಯಸಿದ್ದು ಹಾಲು ಅನ್ನ ವೈದ್ಯ ಹೇಳಿದ್ದು ಹಾಲು ಅನ್ನ" ಎನ್ನುವಂತೆ ಚೆನ್ನಯ್ಯ ಪತ್ರ ಬರೆಯುವ ಮೊದಲು ಅಬ್ದುಲ್ ಮೇಷ್ಟ್ರು ಇವರಿಗೊಂದು ಪತ್ರ ಬರೆದರೂ. ಇವರಿಗೆ ಪರಮಾನಂದವಾಯಿತು. ಎರಡು ಕುಟುಂಬಗಳು ಒಂದೇ ಮನೆಯವರಂತೆ ಇದ್ದುದನ್ನು ನಾವು ಕಾಣಬಹುದಾಗಿತ್ತು. ಹೀಗೆ ಇರುವಾಗ ಮಾತಿನ ಮಧ್ಯದಲ್ಲಿ "ಏನು ಮಾಡಿದ ಅಂತೀರ ಇವ್ನ! ನಾನು ಮುಂದ್ಕೆ ಓದ್ಲೇಬೇಕು ಅಂತಾನೆ" ಎಂದು ಸಣ್ಣಗೆ ಪ್ರಸ್ತಾಪ ಮಾಡಿ 'ಏನಾದ್ರು ಈ ಬಗ್ಗೆ ತಾವು ಯೋಚನೆ ಮಾಡಿದ್ರ?" ಎಂದು ಅಜೀದನ ಕೇಳಿದಾಗ "ಓದ್ಲಿ ಬಿಡಿ ಗೌಡರೆ ನಮ್ಮನೆಲೇ ಇದ್ಕೊಂಡು ಓದ್ತಾನೆ ಬಿಡಿ! ನಮ್ಮ ಮಕ್ಕಳ ಜೊತೆ ನನ್ನ ಮಗ, ನನ್ನ ಮಗಳು ಇಬ್ರೆ ತಾನೆ ನನ್ನ ಮನೇಲಿ ಇರಬೇಕು? ಅವ್ರ ಜೊತೇಲಿ ಇವ್ನೊಬ್ಬ ಇದ್ದು ಓದ್ಕೊಂಡ್ರೆ ನಮಗೇನೂ ಭಾರ ಆಗೋದಿಲ್ಲ ಬಿಡಿ. ಯಾಕೆ ಆ ಬಗ್ಗೆ ತಾವು ಯೋಚ್ನೆ ಮಾಡಿ ತಲೆ ಕೆಡಿಸ್ಕೋತ್ತೀರಿ" ಎಂದರು.

ಹೀಗಿನ ಕಾಲದಲ್ಲಿ ಸಂಬಂಧದವರ ಮನೆಯಲ್ಲಿ ಮಕ್ಕಳನ್ನು ಬಿಟ್ಟು ಓದಿಸುವುದೇ ಕಷ್ಟವಾಗಿರುವಾಗ ಯಾವುದೇ ಸಂಬಂಧವಿಲ್ಲದ ಬೇರೆ ಮತದವರು ಆದ ಅಜೀಜ್ ಸಾಬೀ ಹೇಳುವ ಮಾತಿನಲ್ಲಿ ಅವರ ಉದಾರತನ ಎದ್ದು ಕಾಣುತ್ತದೆ.

ಯಾವುದೇ ಒಂದು ಕೆಲಸ ಮಾಡಬೇಕಾದರೂ ಸ್ವಾರ್ಥತೆಯಿಂದ ಯೋಚಿಸುವ ಈ ಕಾಲದಲ್ಲಿ ಇಂತಹ ವ್ಯಕ್ತಿಯಿರುವುದು ಅಚ್ಚರಿಯೇ ಸರಿ. ಇವರು ಹೇಳಿದ ಮಾತು ದಾರಿಕಾಣದ ಕುರುಡನಿಗೆ ಒಂದು ಕೋಲು ದೊರೆತರೆ ಯಾವ ರೀತಿ ಆನಂದವಾಗುತ್ತದೋ ಅಂತಹ ಆನಂದ ಅನುಭವಿಸುತ್ತಾರೆ. ಇದರ ಜೊತೆಗೆ ನಾವು ಸಾಬಿಯ ಮನೆಯಲ್ಲಿ ಮಗನನ್ನು ಓದಿಸುತ್ತಿದ್ದಾರೆ ಎಂದು ಜನರು ಆಡಿಕೊಳ್ಳುವುದನ್ನು ನೆನೆದು ಅನ್ಯಮನಸ್ಕರಾಗಿ ಇರುವಾಗ ಅಜೀದ್ ಸಾಬಿ 'ಆಗ್ಲಿ ಬಿಡಯ್ಯ ಚೆನ್ನಯ್ಯ! ಜನ ಹೆಂಗಿದ್ರು ಅಂದೇ ಅಂತಾರೆ, ಕೊಟ್ರು ಅಂತಾರೆ, ಕೆಟ್ರು ಆಡ್ಕೋತಾರೆ ಬದುಕುದ್ರು ಆಡ್ಕೋತಾರೆ, ಜನಗಳ್ಗೇನ್ ನಾವು ಬದುಕ್ ಬೇಕಾಗಿಲ್ಲವಲ್ಲ! ನಾವ್ ಮುಂದುವರಿಯೋದ್ ನೋಡ್ಬೇಕಣಯ್ಯ! ಈ ಜಾತಿ ಕುಲ ಎಲ್ಲ ಏನಂದ್ಕೊಂಡಿದ್ದೀರಿ ನೀನಿನ್ನು!" ಎಂದು ಆ ಅಜೀದ್‌ರವರು ಕೆಂಡವಾದರು.

ವಿದ್ಯಾವಂತನಾದ ಅಜೀದ್ ಚೆನ್ನಯ್ಯ ಮನಸ್ಸು ಬದಲಾಯಿಸಿ ಮಗನ ಓದಿಗೆ ಅನುಕೂಲ ಮಾಡಿಕೊಡುತ್ತಾನೆ. ಜಾತಿ, ಮತ, ಕುಲ ಯಾವುದೂ ಇಲ್ಲ ಮನುಷ್ಯ ಜಾತಿಯೊಂದೇ ಆ ಜಾತಿಗೆ ಅವಮಾನವಾಗದಂತೆ ನಡೆದುಕೊಳ್ಳಬೇಕು. ಇವು ಸಾಮಾಜಿಕ ಪಿಡುಗುಗಳ ರೀತಿ ನಮ್ಮನ್ನು ಹಾಳುಮಾಡುತ್ತೇವೆ ವಿನಃ ಉದ್ಧಾರ ಮಾಡುವುದಿಲ್ಲ. ಮನುಷ್ಯ ಜಾತಿಯನ್ನು ಬಿಟ್ಟು ಅನ್ಯ ಜಾತಿಯನ್ನು ತೊಡೆದು ಹಾಕಬೇಕು ಎಂಬುದನ್ನು ತಿಳಿಸಿಕೊಡುತ್ತದೆ. ಮಾನವೀಯ ಹಿತ ದೃಷ್ಟಿಯಿಂದ ಯೋಚಿಸಿದ ಅಜೀದ್ ಒಂದು ಮಗುವಿನ ಭವಿಷ್ಯವನ್ನು ರೂಪಿಸುವ ನಿರ್ಧಾರ ಮಾಡಿ ಅವನಿಗೆ ದಾರಿದೀಪವಾದನು. ಮಾಡುವ ಕೆಲಸವನ್ನು ಹಾಳು ಮಾಡುವವರೇ ಹೆಚ್ಚಿರುವ ಈ ಕಾಲದಲ್ಲಿ ಇಂತಹ ಉದಾರ ವ್ಯಕ್ತಿ ಸಮಾಜದಲ್ಲಿ ಅಪರೂಪ.

ಬೆಳೆಯು ಕುಡಿಯಲ್ಲಿ ಮೂಡುವ ಭಾವನೆ ಈ ರೀತಿಯಿದೆ. ನೀನ್ ಇನ್ ಸುಮ್ನಿರವ್ವ ಸಾಕು ಎಲ್ಲಾ ನಿಮ್ಮಪ್ಪನ್ ಕಾಲದ್ದನ್ನೇ ಹೇಳ್ಬೇಡ ನಮ್ಗೂ ಆಡ್ಕೋಳ್ಳೋರೆಲ್ಲಾ ನಮ್ಗೆ ಹಿಟ್ಟು ಬಟ್ಟೆ ಕೊಡೋದಿಲ್ಲ ಕಣ! ಈಗಿನ ಕಾಲ್ದಲ್ಲಿ ಈ ಜಾತಿಗೀತಿ ಎಲ್ಲಾ ಯಾರ್ ಕೇಳಾರು?" ಎಂದು. ಈ ಮಾತಿಗೆ ಅವನ ತಮ್ಮಂದಿರೆಲ್ಲಾ ಬೆಂಬಲಿಸಿದರು. ಇದನ್ನು ಗಮನಿಸಿದಾಗ ದೊಡ್ಡವರ ಭಾವನೆಗೂ ಮಕ್ಕಳ ಭಾವನೆಗೂ ಎಷ್ಟೊಂದು ವ್ಯತ್ಯಾಸವನ್ನು ಕಾಣಬಹುದಾಗಿದೆ. ದೊಡ್ಡವರಲ್ಲಿರುವ ಜಾತೀಯತೆ ಮಕ್ಕಳಲ್ಲಿ ಕಂಡುಬರುವುದಿಲ್ಲ. ಇಂತಹ ಪೀಳಿಗೆಯನ್ನು ನೋಡಿದಾಗ ಮುಂದಿನ ಜನಾಂಗ ಈ ಜಾತೀಯತೆಯನ್ನು ಸಂಪೂರ್ಣವಾಗಿ ತೊಡೆದು ಹಾಕುತ್ತದೆ ಎಂಬ ಭಾವನೆ ಮೂಡುತ್ತದೆ. ಶೈಕ್ಷಣಿಕ ಮಟ್ಟ ಹೇಗೆ ಬೆಳೆದಿದೆ ಎಂಬುದು ತಿಳಿಯುತ್ತದೆ.

ಅಜೀದ್ ಮಾನವೀಯ ಗುಣದಿಂದಾಗಿ ರಾಜಣ್ಣನಿಗೆ ಮುಂದೆ ಓದುವ ಅವಕಾಶವನ್ನು ಕಲ್ಪಿಸಿಕೊಟ್ಟಿತು. ಮಗನನ್ನು ಎಲ್ಲಿ ಇರಿಸುವುದು ಎಂದು ಯೋಚಿಸಿದಾಗ

ದೇವರಂತೆ ಪ್ರತ್ಯಕ್ಷವಾಗಿ ತಮ್ಮ ಮನೆಯಲ್ಲಿ ಇದ್ದುಕೊಂಡು ಓದುವಂತೆ. ಅವಕಾಶ ಮಾಡಿಕೊಟ್ಟರು. ಲೋಕದ ಮಾತಿಗೆ ತಲೆಗೆಡಿಸಿಕೊಳ್ಳುವಂತೆ ನಮ್ಮ ಭವಿಷ್ಯದ ಚಿಂತೆ ನಾವೇ ಮಾಡಬೇಕು. ಸಲಹೆಯನ್ನು ನೀಡಿದರು. ಈ ಭಾವನೆ ಮುಸ್ಲಿಂ ಜನರಲ್ಲಿ ಹುಟ್ಟುವುದು ಅಚ್ಚರಿಯೆ ಸರಿ. ವಿದ್ಯಾವಂತನಾದ ಅಜೀದ್ ತಮ್ಮ ಧರ್ಮದ ವಿರೋಧಿಯಂತೆ ಕಂಡುಬಂದರು. ಅವನು ಮಾಡಿದ ಕೆಲಸ ಶ್ಲಾಘನೀಯವಾದದು. ಚೆನ್ನಯ್ಯನ ಮಕ್ಕಳಲ್ಲಿ ಮೂಡುವ ಆಲೋಚನೆಗಳು ನಗರ ವಾಸಿಗರನ್ನು ಮೀರಿಸುವಂತಹದು. ಹಳ್ಳಿಗಾಡಿನ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬೆಳೆದ ಚನ್ನೇಗೌಡ ತನ್ನ ತಮ್ಮನಿಗೆ ಮುಸ್ಲಿಂ ಹುಡುಗಿಯ ಜೊತೆ ಮದುವೆ ಮಾಡಿದರೆ ಎಷ್ಟು ಚೆನ್ನಾಗಿರುತ್ತದೆ ಎಂದು ಹೇಳಿದ್ದು ಜಾತೀಯತೆಯನ್ನು ಖಂಡಿಸಿ. ಎಲ್ಲರೂ ಒಂದೇ ಮಾನವ ಜಾತಿಯನ್ನು ಪ್ರೀತಿಸುವಂತೆ ಸಂದೇಶವನ್ನು ಜನರಿಗೆ ಸಾರಿದ್ದಾನೆ. ಈ ರೀತಿಯ ಆಲೋಚನೆಗಳನ್ನು ಹೊಂದಿದ ಕರೀಗೌಡರು ಈ ಪಾತ್ರಧಾರಿಗಳ ಮೂಲಕ ಸಹೃದಯರ ಮನಮುಟ್ಟಿಸುವಂತಹ ಪ್ರಯತ್ನ ಮಾಡಿದ್ದಾರೆ.

**'ಜೊತೆಗಾತಿ'** ಈ ಕತೆಯಲ್ಲಿ ಕೃಷ್ಣಪ್ಪ ತಂದೆ ಬಳಿ ಹಠಮಾಡಿ ಓದು ಮುಂದುವರಿಸಿ ಎಂ.ಎ. ಮಾಡಿ ಪದವೀಧರನಾದ ಮೇಲೆ ಕೆಲಸಕ್ಕಾಗಿ ಅನೇಕ ಕಡೆ ಅಲೆದು ಕೆಲಸ ಸಿಗಲಿಲ್ಲವೆಂದು ಚಿಂತಿಸಿ ಈ ಸಾರಿ ಒಂದು ಕಡೆಯಾದರೂ ಕೆಲಸವನ್ನು ಪಡೆದೇ ಪಡೆಯಬೇಕು ಎಂದು ಆತ್ಮವಿಶ್ವಾಸವನ್ನು ತಾಳುತ್ತಾನೆ. ಆದರೂ ತನ್ನ ಮನಸ್ಸಿನಲ್ಲಿ ಅಪನಂಬಿಕೆ ಮೂಡುತ್ತದೆ. ತನ್ನ ತಾಯಿ ಪಡುವ ಕಷ್ಟ ಒಂದು ಕಡೆಯಾದರೆ ತಂದೆ ಖಾಯಿಲೆಯಿಂದ ನರಳುತ್ತಿರುವುದು ಮತ್ತೊಂದು ಕಡೆ ಇವರ ಮನಸ್ಥಿತಿ ಅದ್ವಾನ ಮಾಡಿಬಿಟ್ಟಿದೆ. ವಿದ್ಯಾವಂತರಾದವರು ಸ್ವಾತಂತ್ರ್ಯ ಮನೋಭಾವ ಬೆಳೆದು ತಮ್ಮ ಬಾಳಸಂಗಾತಿಯನ್ನು ಆಯ್ಕೆಮಾಡಿಕೊಳ್ಳುವಂತ ಮನೋವೃತ್ತಿ ಬೆಳೆದಿದೆ. ಬಾಲ್ಯ ವಿಧವೆಯಾದ ನೇತ್ರಾಳಿಗೆ ಬಾಳು ಕೊಡುವುದಕ್ಕೆ ಮುಂದೆ ನುಗ್ಗಬಹುದು. ಪ್ರವೃತ್ತಿ ಇಲ್ಲಿ ವ್ಯಕ್ತವಾಗುತ್ತದೆ. ಮನೆಯಾಳಾದ ಹೊಲಗೇರಿ ಕರಿಯನಿಗೆ ಜಾತಿಪದ್ಧತಿ ವಿರುದ್ಧ ಶ್ರೀಮಂತಿಕೆಯ ವಿರುದ್ಧ ಹೋರಾಡುವಂತೆ ಪಾಠ ಹೇಳಿ ಧೈರ್ಯ ತುಂಬುವುದನ್ನು ನಾವು ಕಾಣಬಹುದಾಗಿದೆ. ಹಳ್ಳಿಗಾಡಿನ ಯುವಕರು ಯಾವುದೆಲ್ಲಾ ಸಾಧನೆ ಮಾಡಲು ಸಾಧ್ಯ ಎಂಬುದನ್ನು ಕೃಷ್ಣಪ್ಪನ ಮೂಲಕ ತಿಳಿಸಿಕೊಡುವ ಪ್ರಯತ್ನ ನಡೆದಿದೆ.

'ದುಃಖಿಗಳು' ಮಗ ಎಸ್ಸೆಸ್ಸೆಲ್ಸಿಯಲ್ಲಿ ಮೊದಲನೆಯ ದರ್ಜೆಯಲ್ಲಿ ಪಾಸು ಮಾಡಿದಾಗಲೇ ಎಲ್ಲಾದರೂ ಒಂದು ನೌಕರಿ ಕೊಡಿಸಿ ನಿರಾಳವಾಗಿ ಇದ್ದುಬಿಡುವ ಅಂದುಕೊಂಡಿದ್ದ ರಾಮಯ್ಯ. ಆದರೆ ಊರಿನಲ್ಲಿ ತನ್ನ ಹಿತೈಷಿಗಳು ಹುಡಗನಿಗೆ ಇನ್ನೂ ಚಿಕ್ಕ ವಯಸ್ಸು. ಅವನಿಗೆ ಯಾರು ಕೆಲಸ ಕೊಟ್ಟಾರು? ಮುಂದಕ್ಕೆ ಇನ್ನೂ ಓದಿಸು ಅಂದರು. ಮಗನೂ ಮುಂದಕ್ಕೆ ಓದಲೇಬೇಕೆಂದು ಹಿಡಿದ ಹಠವನ್ನು ಅಪ್ಪ

ವಿರೋಧಿಸಲಾರದೆ ಹೋದ. ಪಿಯುಸಿಯಲ್ಲಿಯೂ ಮೊದಲನೇ ದರ್ಜೆಯಲ್ಲಿ ತೇರ್ಗಡೆಯಾದಾಗ ಆತನ ಓದು ಗಮನಿಸಿದ್ದ ಊರಿನ ಮಾಧ್ಯಮಿಕ ಶಾಲೆಯ ಮಾಸ್ತರರಾದ ಶ್ರೀ ಕೆ.ಲಿಂಗಪ್ಪನವರು "ನಿನ್ನ ಮಗನಿಗೆ ಉತ್ತಮ ಭವಿಷ್ಯ ಇದೆ. ನಿನಗೆ ಏನೇ ಕಷ್ಟವಾಗಲಿ ಬಿಡಿಸಬೇಡ, ಮುಂದಕ್ಕೆ ಮೆಡಿಕಲ್‌ಗೆ ಕಳುಹಿಸು, ಸೀಟು ಸಿಕ್ಕಿದೆಯಂತೆ" ಎಂದು ರಾಮಯ್ಯನಿಗೆ ಉಪದೇಶವಿತ್ತರು. ಅಂದು ರಾಮಯ್ಯ ಮಾಸ್ತರರ ಮಾತನ್ನು ಕಿತ್ತುಹಾಕಲಾಗಿ ಹೋದದ್ದು ತನ್ನ ಮಗ ತಾನು ಓದಲೇಬೇಕೆಂದು ಹಿಡಿದ ಹಠ ಬಿಡದೆ ಹೋದದ್ದು ಆತನ ನೆನಪಿನಲ್ಲಿ ಇಳಿಯುತ್ತಿತ್ತು.

ಪ್ರಾರಂಭದಲ್ಲಿ ಮಕ್ಕಳನ್ನು ಓದಿಸಬೇಕೆಂಬ ತವಕ ಎಲ್ಲ ತಂದೆ ತಾಯಿಯರಿಗೂ ಇರುವುದು ಸಹಜ ಅಂದುಕೊಂಡಿದ್ದನ್ನು ನೆರವೇರಿಸಲು ಬಹಳ ಕಷ್ಟವಾಗಿರುತ್ತದೆ. ಅದರಲ್ಲೂ ಹಳ್ಳಿಗಾಡಿನ ಪ್ರದೇಶದಲ್ಲಿ ಮಕ್ಕಳ ಓದಿಗೆ ಕೂಲಿನಾಲಿ ಮಾಡಿದರು ಸಾಧ್ಯವಾಗುವುದಿಲ್ಲ. ಇದಕ್ಕಾಗಿ ತಮ್ಮ ಮಕ್ಕಳನ್ನು ಜೀತಕ್ಕೆ ಇಟ್ಟ ಸಾಕ್ಷಿ ದುಃಖಿಗಳು ಕಥೆಯಲ್ಲಿ ನಿರೂಪಿತವಾಗಿದೆ. ಹಳ್ಳಿಗಾಡಿನಲ್ಲಿ ಮನೆಯ ತುಂಬ ಮಕ್ಕಳಿರುತ್ತವೆ. ಎಲ್ಲರಿಗೂ ಶಿಕ್ಷಣ ಕೊಡಿಸಲು ಕಷ್ಟವಾಗಿ ಹಿರಿಯ ಮಗನ ಓದಿಗಾಗಿ ಕಿರಿಯ ಮಗನನ್ನು ಹೈಸ್ಕೂಲ್ ಬಿಡಿಸಿ ಜೀತಕ್ಕೆ ಇಟ್ಟು ಮುಂಗಡ ಹಣ ಪಡೆದ ಓದಿಸುವ ಪರಿಪಾಠವನ್ನು ಕಾಣಬಹುದು. ಸಣ್ಣ ಹಿಡುವಳಿದಾರ ಒಂದ ವರ್ಷ ಬೆಳೆಯುವ ಭತ್ತ ರಾಗಿಯನ್ನು ಮಗನ ಓದಿಗಾಗಿ ಮಾಡಿದ ಸಾಲ ತೀರಿಸಲು ಬಡ್ಡಿ ಕೊಡುವುದಕ್ಕಾಗಿ ತಾನು ಸಾಕಿದ ರಾಸುಗಳನ್ನು ಕೂಡ ಮಗನ ಓದಿಗೆ ವೆಚ್ಚವಾಯಿತು. ರೇಷ್ಮೆ ಹುಳು ಸಾಕಿದ್ದರಿಂದ ಬಂದ ಹಣವು ಮನೆಯ ಖರ್ಚಿಗೆ ಅಂತ ಅಲ್ಲಿಗಲ್ಲಿಗೆ ನೆರವಾಯಿತು. ಇನ್ನೊಂದು ವರ್ಷ ಕಷ್ಟಪಟ್ಟರೆ ನಮ್ಮ ಸಮಸ್ಯೆಗಳೆಲ್ಲಾ ಪರಿಹಾರವಾಗುತ್ತದೆ ಎಂದು ಯೋಚಿಸುವುದು ಸಹಜವಾದುದು.

ಕಡುಬಡತನ ಅದರಲ್ಲೂ ಹಳ್ಳಿಗಾಡಿನಲ್ಲಿ ಮಕ್ಕಳನ್ನು ಓದಿಸಿ ಕೆಲಸ ಕೊಡಿಸುವುದು ಒಂದು ದೊಡ್ಡ ಸಾಧನೆ ಮಳೆಯನ್ನು ನಂಬಿಕೊಂಡು ಜೀವನ ನಡೆಸುವ ರೈತ ಅದರಿಂದ ಬರುವ ಆದಾಯವು ಅಷ್ಟಕ್ಕಷ್ಟೇ ಮಕ್ಕಳನ್ನು ಓದಿಸಬೇಕೆಂದರೆ ಸಾಲಸೋಲಾ ಮಾಡಲೇ ಬೇಕಾದ ಪ್ರಮೇಯ ಹೆಚ್ಚು. ನಾವು ಕಷ್ಟಪಟ್ಟರೂ ಪರವಾಗಿಲ್ಲ ಮುಂದೆ ನಮ್ಮ ಭವಿಷ್ಯ ಚೆನ್ನಾಗಿ ಇರುತ್ತದೆ ಎಂಬ ಭಾವನೆ. ಮನೆಯಲ್ಲಿ ದಿನಸಿ ರಾಸುಗಳನ್ನು ಮಾರಿ ಮಕ್ಕಳನ್ನು ಓದಿಸುವುದನ್ನು ನಾವು ಕಾಣಬಹುದು. ತಂದೆತಾಯಿ ಪಡುವ ಕಷ್ಟಕ್ಕೆ ತಕ್ಕಂತೆ ಪ್ರಥಮ ದರ್ಜೆಯಲ್ಲಿ ಪಾಸಾಗಬೇಕೆಂಬ ದೃಢನಿರ್ಧಾರ, ಸಾಧನೆ ವಿದ್ಯಾವಂತರ ಮಕ್ಕಳನ್ನು ನಾಚುವಂತೆ ಮಾಡುತ್ತದೆ. ಮೇಷ್ಟ್ರು ಹುದ್ದೆಗೆ ಖುಷಿಪಡದ ಡೆಪ್ಯೂಟಿ ಕಮೀಷನರ್. ಡಾಕ್ಟರ್ ಹುದ್ದೆ ಬಯಸಿ ಓದುವ ಹಳ್ಳಿಗಾಡಿನ ಮಕ್ಕಳ ಛಲ ಪ್ರತಿಯೊಂದು ಮಕ್ಕಳಿಗೆ ಸ್ಫೂರ್ತಿಯಾಗಬೇಕು.

ಬಡವರು ತಮ್ಮ ಮಕ್ಕಳ ಓದಿಗಾಗಿ ದುಡ್ಡು ಹೊಂದಿಸುವ ಹೊತ್ತಿಗೆ ಸಾಕುಸಾಕಾಗುತ್ತದೆ. ಸಾಹುಕಾರ ಬಳಿ ಹಲ್ಲುಗಿಜ್ಜಿ ದುಡ್ಡುಹೊಂದಿಸುವುದು ಬಲುಕಷ್ಟದ ಕೆಲಸ ಎಂಬುವುದನ್ನು ಈ ವಾಕ್ಯದಿಂದ ಸ್ಪಷ್ಟಪಡಿಸಬಹುದು. ಬಸಪ್ಪನವರು, 'ನಿನ್ನ ಮಗ ಹೇಗಿದ್ದಾನೆ? ಈ ವರ್ಷ ಕೊನೆಯೇ?" ಎಂದರು. "ಹೌದು ಸ್ವಾಮಿ ಕಾಗದ ಬರೆದಿದ್ದಾನೆ. ಅದಕ್ಕೆ ತಮ್ಮನ್ನು ನೋಡುವ ಅಂತ ಬಂದೆ" ಅಂದ. "ಏನು ವಿಷಯ?" ಹಣ ಕಳಿಸಿ ಅಂತ ಬರೆದಿದ್ದಾನೆ. "ಕಳಿಸು, ಮತ್ತೆ ಡಾಕ್ಟರ್ ಮಾಡಿಸುವುದು ಅಷ್ಟು ಸುಲಭ ಏನಯ್ಯ" ಎಂದು "ಆಯ್ತು ಕಳಿಸು, ಇದೊಂದು ವರ್ಷ ಹೇಗೋ ಕಷ್ಟಬೀಳು" ಎಂದರೆ ರಾಮಯ್ಯ ಮೆಲ್ಲಗೆ "ಅದಕ್ಕೇ ತಮ್ಮ ಹತ್ತಿರ ನಾನು ಬಂದದ್ದು ಸ್ವಾಮಿ ಫೀಜು, ಬಟ್ಟೆ, ಹಾಸ್ಟೆಲ್ ಖರ್ಚಿಗೆ ಎರಡು ಸಾವಿರ ಬೇಕು ಅಂತ ತಿಳಿಸವ್ನೆ. ತಾವು ಇದಕ್ಕೆ ಇಲ್ಲ ಅನ್ನಬೇಡಿ" ಎಂದು ಬೇಡಿಕೊಳ್ಳುವುದನ್ನು ಕಾಣಬಹುದು.

ಹಳ್ಳಿಯ ಯಜಮಾನರಲ್ಲಿ ಕಂಡುಬರುವ ಸ್ವಾರ್ಥ ನನ್ನ ಮನೆಯಲ್ಲಿ ಮಗನನ್ನು ಜೀತಯಿರಸದೆ ಸಿದ್ದಪ್ಪನ ಬಳಿ ಇರಿಸಿದೆ. ಅವನ ಬಳಿಯೇ ಹೋಗಿ ಕೇಳು ಎಂಬ ತಾತ್ಸರ ಮಾತುಗಳನ್ನು ಆಡುತ್ತಾನೆ. ಮಕ್ಕಳನ್ನು ಜೀತಕ್ಕೆ ಸೇರಿಸಬಾರದು ಎಂದು ತಿಳಿದಿದರೂ ಕೂಡ ಅದನ್ನು ಪ್ರತಿಭಟಿಸಿದೆ. ತನ್ನ ಕಷ್ಟಕ್ಕೆ ಮಕ್ಕಳ ಒತ್ತೆಯಿಡುವುದು. ಕಂಡುಬರುತ್ತದೆ. ಯಜಮಾನನನ್ನು ಪುಸಲಾಯಿಸಿ ಬಡ್ಡಿಗೆ ಹಣ ಪಡೆಯುತ್ತಾರೆ. ಹೀಗೆ ಬಡ್ಡಿಗೆ ಹಣಪಡೆದು ಸಾಯವವರೆವಿಗೂ ರೈತರು ಅವರ ಹಂಗಿನಲ್ಲಿಯೇ ಸಾಯಬೇಕಾಗುತ್ತದೆ. ಅವರ ವಜ್ರದೃಷ್ಟಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದೆ ಅವರ ಜೀತಾದಾಳುಗಳಾಗಿ ಸಾಯುವುದನ್ನು ಕಾಣಬಹುದು. ಯಜಮಾನ ಇವರ ಕಷ್ಟವನ್ನು ದುರುಪಯೋಗಪಡಿಸಿಕೊಂಡು ಗದ್ದೆಯನ್ನು ಭೋಗ್ಯಕ್ಕೆ ಮಾಡಿಸಿಕೊಳ್ಳುತ್ತಾನೆ. ಈ ಒಂದು ಕುತಂತ್ರಗಳು ಹೆಚ್ಚಾಗಿ ಹಳ್ಳಿಗಳಲ್ಲಿ ಕಂಡುಬರುತ್ತದೆ. ಹೀಗೆ ಸಾಲಕೊಡುವ ನೆವದಲ್ಲಿ ಸಂಪೂರ್ಣವಾಗಿ ಬಡವನ ಜಮೀನನ್ನು ವಶಪಡಿಸಿಕೊಂಡು ಅವರು ಕೂಲಿನಾಲಿ ಮಾಡುವುದೇ ಅವರ ಬದುಕು ಎಂಬಂತೆ ಮಾಡುತ್ತಾರೆ. ಆದರೆ ಅದನ್ನು ಲೆಕ್ಕಿಸದ ರೈತರ ತನ್ನ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಸಂಪೂರ್ಣವಾಗಿ ತ್ಯಾಗ ಮಾಡುವುದನ್ನು ಕಾಣಬಹುದು.

ಇಲ್ಲಿ ರೈತ ತನ್ನ ಜಮೀನನ್ನು ಭೋಗ್ಯಕ್ಕೆ ಮಾಡಿದ ಬಹಳ ದುಃಖವಾಯಿತು. ನನ್ನ ಮರ್ಯಾದೆ ಹೋಗಬಾರದು ಎಂದು ತಾನೆ ಗುತ್ತಿಗೆ ಮಾಡುತ್ತೇನೆ ಎಂದರು. ಅದರಿಂದ ಬರುವ ಪೂರ್ಣ ಭತ್ತ ಕೇಳಿ ಇಬ್ಬರ ನಡುವೆ ಜಗಳವಾಗಿ ತನ್ನ ಹಣ ಕೇಳಿದಾಗ ಹೊಲ ಉಳುವುದಕ್ಕೆ ಇದ್ದ ಹೋರಿಗಳನ್ನು ಮಾರಿ ಆತನ ಸಾಲ ತೀರಿಸುತ್ತಾನೆ. ತನ್ನ ಮಕ್ಕಳ ಓದಿಗಾಗಿ ಕೃಷಿಕರು ಪಡುವ ಕಷ್ಟ ಮಾತಿನಲ್ಲಿ ಹೇಳಲು

ಸಾಧ್ಯವಾಗುವುದಿಲ್ಲ. ಅದಕ್ಕಾಗಿ ತಮ್ಮ ಮನೆಮಠವನ್ನು ಕಳೆದುಕೊಂಡು ಊರಿನಲ್ಲಿ ಜನರಿಂದ ಅಪಮಾನಕ್ಕೆ ಒಲಗಾಗಿ ಜೀವನ ಸಾಗಿಸುತ್ತಾರೆ. ಪ್ರತಿಯೊಂದು ಕಥೆಯಲ್ಲೂ ಮಕ್ಕಳ ಓದಿಗಾಗಿ ಒದ್ದಾಡುವುದನ್ನು ನಾವು ಕಾಣಬಹುದು. ಅವರು ಜೀವನ ಸಾಗಿಸಲು ಸಂಕಷ್ಟ ಬಂದು ಒದಗಿದರೂ ಮಕ್ಕಳನ್ನು ಓದಿಸುವುದನ್ನು ಬಿಡುವುದಿಲ್ಲ. ಎಷ್ಟೇ ಕಷ್ಟವಾದರೂ ತಮ್ಮ ಮಕ್ಕಳು ವಿದ್ಯಾವಂತರಾಗಬೇಕೆಂಬ ದೃಢನಿರ್ಧಾರ ಅವರದಾಗಿತ್ತು.

'ನೆನಪಲ್ಲ ವಾಸ್ತವ' ತಗ್ಗಳ್ಳಿಗೆ ಅಂತೂ ಇಂತು ಕೊನೆಗೂ ಪ್ರಾಥಮಿಕ ಶಾಲೆ ಬಂದುದು ಒಂದು ದೊಡ್ಡ ಸಾಹಸವಾಗಿತ್ತು. ತಗ್ಗಳ್ಳಿಗೆ ಶಾಲೆ ಬೇಕೆ ಬೇಕು ಅಂತ ಕೇಳುತ್ತಿದ್ದವರು ಗುಂಪಿನಲ್ಲಿ ಮುಖ್ಯವಾಗಿ ಕಾಡಣ್ಣ, ನಿಂಗಣ್ಣ, ಬೋರೇಗೌಡ, ಮಾರೇಗೌಡ, ಹೊನ್ನಯ್ಯ, ಸುಗ್ಗಯ್ಯ, ತಿಮ್ಮಾಬೋವಿ ಮುಂತಾದವರಿದ್ದರು. ಆದರೆ ತಮ್ಮೂರಿಗೆ ಶಾಲೆ ಬೇಡ ಅನ್ನುವವರ ಗುಂಪಿನಲ್ಲಿ ಪ್ರಧಾನವಾಗಿ ಗುಂಡಯ್ಯ, ಸಣ್ಣಪ್ಪ, ತಿಪ್ಪಣ್ಣ, ಲಿಂಗಯ್ಯ, ಭೈರೇಗೌಡ, ಕರಡೀಗೌಡ ಮತ್ತು ತಗ್ಗಳ್ಳಿಯ ಕೆಲವು ಗ್ರಾಮಸ್ಥರು ಸೇರಿದ್ದರು.

ಆ ವೇಳೆಗಾಗಲೇ ಹಾಳೂರಿನಲ್ಲಿ ಸರ್ಕಾರಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳೆರಡೂ ಇದ್ದವು. ಪ್ರೌಢಶಾಲೆಗೆ ಮಾತ್ರ ತಗ್ಗಳ್ಳಿಗೆ ಮತ್ತೊಂದು ದಿಕ್ಕಿಗೆ ಐದು ಮೈಲಿ ದೂರದಲ್ಲಿದ್ದ ದುರ್ಗಕ್ಕೆ ಹೋಗಬೇಕಾಗಿತ್ತು.

ಎಷ್ಟು ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳೆ ಇಲ್ಲದೆ ಓದುವ ಮಕ್ಕಳೆಲ್ಲಾ ಹೊಂಗೆ ಮರದ ನೆರಳಿನಲ್ಲಿ ಮರಕೋತಿ ಆಟ ಆಡುತ್ತಾ ತಲ್ಲೀನರಾಗಿದ್ದರು. ಹಳ್ಳಿಗೆ ಶಾಲೆಯನ್ನು ಮಂಜೂರು ಮಾಡಿಸುವುದಕ್ಕಾಗಿ ಮಕ್ಕಳ ಹೆಸರನ್ನು ನೋಂದಾಯಿಸಿ-ಕೊಳ್ಳುವುದಕ್ಕೆ ಊರಿನ ಹಿರಿಯರೆಲ್ಲರೂ ಸೇರಿಸಿ ಮಕ್ಕಳನ್ನು ಶಾಲೆಗಾಗಿ ದಾಖಲುಮಾಡಲು ಶುರುಮಾಡುತ್ತಾರೆ. 'ಒಂದು ಒಳ್ಳೆಯ ಕೆಲಸಕ್ಕೆ ಅನೇಕ ವಿಘ್ನಗಳು' ಎಂಬಂತೆ. ಊರಿಗೆ ಒಂದು ಶಾಲೆಯನ್ನು ತೆರೆಯಲು ತೀರ್ಮಾನಿಸಿದರೆ ಆ ಹಳ್ಳಿಯಲ್ಲಿನ ಅನೇಕ ಮಂದಿ ವಿರೋಧಿಸುತ್ತಾರೆ. ನಮ್ಮ ಮಕ್ಕಳು ವಿದ್ಯಾವಂತರಾಗಲಿ ಎಂಬ ಪರಿಜ್ಞಾನವೇ ಇಲ್ಲದ ಮಂದಿ ನೀಚ ಕೆಲಸ ಮಾಡಲು ತೊಡಗುತ್ತಾರೆ. ಊರಿನಲ್ಲಿ ಆಗುವ ಒಳ್ಳೆಯ ಕೆಲಸಕ್ಕೆ ಕೈಜೋಡಿಸುವ ಜನರು ಹೆಚ್ಚಾಗಿ ಕಂಡುಬರುವುದಿಲ್ಲ. ಈ ಪುಟ್ಟ ಪುಟ್ಟ ಹಳ್ಳಿಗಳಲ್ಲಿ ರಾಜಕೀಯ ಬೀಜಬಿತ್ತುವ ಪ್ರಯತ್ನ ನಡೆಯುವುದನ್ನು ಕಾಣಬಹುದು. ಹಳ್ಳಿಯ ಮಂದಿಗೆ ಯಾರಾದರೂ ಹೆಂಡ ಕುಡಿಸಿ ಈ ಕೆಲಸ ಮಾಡಬೇಕು ಎಂದರೆ ಆ ಕೆಲಸ ಸರಿಯೋ ಅಥವಾ ತಪ್ಪು ಎಂಬುವುದರ ಬಗ್ಗೆ ಯೋಚಿಸದೆ ಅವರು ಬೀಸಿದ ಬಲೆಗೆ ಬಲಿಯಾಗುತ್ತಾರೆ. ತಗ್ಗಳ್ಳಿಗೆ ಪ್ರಾಥಮಿಕ ಶಾಲೆಯನ್ನು ತರಲೇಬೇಕು ಎಂಬುವುದಕ್ಕೆ ಮುಖ್ಯವಾದ ಕಾರಣವಿತ್ತು. ತಗಳ್ಳಿಯಿಂದ

ಹಾಳೂರಿಗೆ ಹೋಗಬೇಕಾದರೆ ಹಾಳೂರಿನ ಕೆರೆ ಏರಿಯ ಮೇಲೆ ಸುಮಾರು ಎರಡು ಮೈಲಿ ದೂರ ನಡೆದು ಹೋಗಿ ಬರಬೇಕಾಗಿತ್ತು. ಹಾಳೂರಿಗೆ ಹೊಗಲು ಕೆರೆ ಏರಿಯನ್ನು ಬಿಟ್ಟರೆ ಅನ್ಯ ಮಾರ್ಗವೇ ಇರಲಿಲ್ಲ. ಕೆರೆ ಏರಿಯ ಆ ಕಡೆ ಅಂಚಿನಲ್ಲಿ ಹಾಳೂರು ಇದ್ದರೆ ಕೆರೆಯ ಏರಿಯಾ ಈ ಕಡೆ ಅಂಚಿನಲ್ಲಿ ತಗ್ಗಳ್ಳಿ ಇತ್ತು. ಹಾಳೂರಿನ ಪ್ರೌಢಶಾಲೆಗೆ ಹೋಗಿಬರುವ ಮಕ್ಕಳೆಲ್ಲಾ ಎಳೆಯ ಕಂದಮ್ಮಗಳಾದ್ದರಿಂದ ಹೆಚ್ಚು ಕಡಿಮೆಯಾಗಿ ಒಂದು ವೇಳೆ ಕೆರೆಯ ನೀರಿನ ಪಾಲಾದರೆ ಗತಿಯೇನು ಎಂಬ ಮುಂಜಾಗ್ರತೆ ಕ್ರಮದಿಂದ ಈ ಶಾಲೆಯನ್ನು ತೆರೆಯಲು ತೀರ್ಮಾನಿಸಿದರು.

ಜನರು ಶಾಲೆಯ ಮುಖ್ಯ ಉದ್ದೇಶವೇನು ಎಂದು ಅರಿಯದೆ ತಮಗೂ ಅದಕ್ಕೂ ಸಂಬಂಧವಿಲ್ಲದಂತೆ ಅನೇಕ ಮಂದಿಯು ಶಾಲೆ ತೆರೆಯುವುದನ್ನು ನಿಲ್ಲಿಸಲು ಪ್ರಯತ್ನಿಸುತ್ತಾರೆ. ಎಷ್ಟೇ ಐಶ್ವರ್ಯವಿದ್ದರೂ ಮಕ್ಕಳಿರದ ಮನೆ ಸ್ಮಶಾನದ ಸಮಾನ ಎಂಬಂತೆ ಕಂದಮ್ಮಗಳ ಜೀವ ಮುಖ್ಯ. ಮಕ್ಕಳನ್ನು ಶಾಲೆಗೆ ಕಳುಹಿಸದೆ ಅವಿದ್ಯಾವಂತರಾಗಿ ಮಾಡಲು ಯಾವ ತಂದೆತಾಯಿಯು ಕೂಡ ಆಸೆ ಪಡುವುದಿಲ್ಲ. ಆ ಊರಿನಲ್ಲಿ ಪ್ರಾಥಮಿಕ ಶಾಲೆ ತೆರೆದರೆ ಈ ಎಳೆಯ ಕಂದಮ್ಮಗಳ ಜ್ಞಾನ ಗೂಡನ್ನು ತೆರೆದಂತಾಗುತ್ತದೆ.

ಬೋರೇಗೌಡರು ಪಂಚಾಯಿತಿ ಮೆಂಬರುಗಳಾದ ಕಾಡಣ್ಣ, ನಿಂಗಣ್ಣ ಅವರುಗಳು ತಮ್ಮ ಊರಿಗೆ ಪ್ರಾಥಮಿಕ ಪಾಠಶಾಲೆ ಬೇಕೆಬೇಕು ಎಂದು ಸರ್ಕಾರಕ್ಕೆ ಒತ್ತಾಯಿಸಿ ಕೇಳಿಕೊಂಡು ಕೊಟ್ಟ ಮನವಿಯ ವಿಷಯ ತಗ್ಗಳ್ಳಿಯಲ್ಲಿ, ಹಾಳೂರಿನಲ್ಲಿ ಒಂದು ದೊಡ್ಡ ಸುದ್ಧಿಯಾಯಿತು. ಅದರ ವಿರೋಧಿ ಗುಂಪಿನಲ್ಲಿ ಹಗೆ ವೈಷಮ್ಯ ಮತ್ತಷ್ಟು ಉದ್ಭವಿಸಿತು. ಅವರು ಹಿಂದೆ ಮುಂದೆ ಬೈಯುತ್ತಾ, ಒಳಗೊಳಗೆ ಕುದಿಯುತ್ತಾ ದ್ವೇಷದ ಮಚ್ಚು ಮಸೆಯುವುದಕ್ಕೆ ಆರಂಭಿಸಿದ್ದರು.

ಹಳ್ಳಿಗಳಲ್ಲಿ ಒಬ್ಬರು ಮತ್ತೊಬ್ಬರ ವಿರುದ್ಧ ಹಗೆ ಸಾಧಿಸುವುದರಿಂದಲೇ ಹೊಡೆದಾಟ ಹೆಚ್ಚಾಗಿ ಹಳ್ಳಿಗಳ ಪ್ರಗತಿ ಕುಂದುತ್ತಾ ಬರುತ್ತಿರುವುದನ್ನು ನಾವು ಕಾಣುತ್ತವೆ. ಶಾಲೆ ತೆರೆದರೆ ನಮ್ಮ ಮಕ್ಕಳಿಗೆ ಅನುಕೂಲವಾಗುತ್ತದೆ ಎಂಬ ಪರಿಜ್ಞಾನವಿಲ್ಲದ ಅನಾಗರೀಕರು. ಈ ವಿಷಯವಾಗಿ ಜಗಳವಾಗಿ ಪೊಲೀಸ್ ಸ್ಟೇಷನ್‌ಗೆ ಹೋಗಬೇಕಾಯಿತು. ಅಲ್ಲಿಗೆ ಹೋಗಿ ರಾಜಿ ಮಾಡಿಸಲು ಇನ್‌ಸ್ಪೆಕ್ಟರ್‌ಗೆ ಹಳ್ಳಿಯಲ್ಲಿ ಬೆಳೆಯುವ ದವಸಧಾನ್ಯಗಳನ್ನು ತೆಗೆದುಕೊಂಡು ಅವರಿಗೆ ತಲುಪಿಸಿ ಅವರಿಂದ ತಗ್ಗಳ್ಳಿಯವನನ್ನು ಬಿಡಿಸಿಕೊಂಡು ಬಂದಿರುವುದನ್ನು ನಾವು ಕಾಣಬಹುದು. ಎಲ್ಲಿವರೆವಿಗೂ ನಮ್ಮ ಜನರು ಮಾಡುವ ಕೆಲಸದ ಬಗ್ಗೆ ಯೋಚಿಸಿ ಸರಿ ತಪ್ಪು ಬಗ್ಗೆ ಪರಿಶೀಲಿಸಿ ಸತ್ಯಮಾರ್ಗದಲ್ಲಿ ನಡೆಯುವವರೆಗೂ ನಮ್ಮ ಹಳ್ಳಿಗಳ ಉದ್ಧಾರ ವಾಗುವುದಿಲ್ಲ ಎನ್ನಬಹುದು. ಸರಕಾರ ತಗ್ಗಳ್ಳಿಗೆ ಶಾಲೆ ಬೇಡ ಎಂದು ಕೊಟ್ಟಿರುವ

ಅರ್ಜಿಯನ್ನು ಕಸದ ಬುಟ್ಟಿಗೆ ಹರಿದುಹಾಕಿ ತಗ್ಗಳ್ಳಿಗೆ ಪ್ರಾಥಮಿಕ ಶಾಲೆಯನ್ನು ಮಂಜೂರು ಮಾಡಿತ್ತು. ಆದರೆ ಅದನ್ನು ಎಲ್ಲಿ ನಡೆಸುವುದು? ಅದಕ್ಕೆ ಜಾಗ ಎಲ್ಲಿದೆ? ಎಂಬುದರ ಬಗ್ಗೆ ಸರ್ಕಾರವು ಬೋರೇಗೌಡರಿಗೆ ಪ್ರಶ್ನಿಸಿ ಸಮಜಾಯಿಷಿ ಕೇಳಿತ್ತು. ತಮ್ಮ ಬಹುದಿನದ ಬೇಡಿಕೆಯನ್ನು ಸರ್ಕಾರ ಕೊನೆಗೂ ಊರ್ಜಿತಗೊಳಿಸಿದ್ದನ್ನು ಕಂಡು ಆ ಗುಂಪಿನ ಜನ ಸಂತಸದಿಂದ ಮುಳುಗಿದ್ದರು. ಆದರೆ ಸರ್ಕಾರ ಶಾಲೆ ನಡೆಸಲು ಸ್ಥಳದ ಪ್ರಶ್ನೆ ಎತ್ತಿದಾಗ ಅವರ ಉತ್ಸಾಹಕ್ಕೆ ಭಂಗ ಬಂದಿತು. ಆಗ ಬೋರೇಗೌಡರು ಸದ್ಯಕ್ಕೆ ತಮ್ಮ ದೊಡ್ಡಪ್ಪನವರ ದೊಡ್ಡ ಹೆಂಚಿನ ಮನೆಯ ಪಡಶಾಲೆಯ ಮೇಲೆ ಶಾಲೆಯನ್ನು ನಡೆಸಲು ತಾವು ಅವಕಾಶ ಕಲ್ಪಿಸಿಕೊಡುವುದಾಗಿ ಸರ್ಕಾರಕ್ಕೆ ಹೇಳಿ ಒಪ್ಪಿಗೆ ಪತ್ರವನ್ನು ಬರೆದುಕೊಟ್ಟರು.

ಹಳ್ಳಿಯ ಜನರು ದಾನ, ಧರ್ಮ ಮಾಡುವುದರಲ್ಲಿ ಎತ್ತಿದ ಕೈ ಅಂತಹ ಉದಾರಗುಣವುಳ್ಳ ಹಿರಿಯರು ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂತೆ ತಮ್ಮ ಮನೆಯ ಜಗುಲಿಯನ್ನು ಶಾಲೆಯನ್ನು ನಡೆಸಲು ಬಿಟ್ಟು ಮಹಾನ್ ಉದಾರಿಗಳ ಹಳ್ಳಿಯಲ್ಲಿದ್ದಾರೆ. ಇಲ್ಲಿನ ಜನರು ಮಕ್ಕಳ ಶಿಕ್ಷಣ ಬಗ್ಗೆ ಅಪಾರ ಒಲವನ್ನು ತೋರುತ್ತಿದ್ದಾರೆ. ಶಾಲೆಯಲ್ಲಿ ಎಲ್ಲ ವರ್ಗದ ಮಕ್ಕಳಿಗೆ ಪ್ರವೇಶವಿದ್ದು ಜಾತಿಮತದ ಬೇಧ ಆ ಮುಗ್ಧ ಮಕ್ಕಳಲ್ಲಿ ಕಂಡು ಬರುವುದಿಲ್ಲ. ಎಲ್ಲರೂ ಒಂದೇ ತಾಯಿಯ ಮಕ್ಕಳು ಎಂಬಂತೆ ವಿದ್ಯಾಭ್ಯಾಸ ಮಾಡುತ್ತಾರೆ. ಒಂದು ಕೂಸು ಕೂಡ ಈ ಶಿಕ್ಷಣದಿಂದ ವಂಚಿತರಾಗಬಾರದು ಎಂಬುದು ನಮ್ಮ ಹಳ್ಳಿಗಾಡಿನ ಹಿರಿಯರ ಆಕಾಂಕ್ಷೆ ಆದ್ದರಿಂದಲೇ ವಿರೋಧಿಗಳ ವಿರುದ್ಧ ಹೋರಾಡಿ ಈ ಹಳ್ಳಿಗೆ ಶಾಲೆ ಮಂಜೂರು ಮಾಡಿಸಿದ್ದು.

ಶಾಲೆ ಎಂದರೆ ಮಕ್ಕಳಿಗೆ ಜೈಲಿನ ಅನುಭವವಾಗಬಹುದು ಎಂದು ಯೋಚಿಸಿ ಪ್ರಾಥಮಿಕ ಮಟ್ಟದಲ್ಲಿ ಆ ಮಕ್ಕಳಿಗೆ ಮನರಂಜನೆ ಕಾರ್ಯಕ್ರಮಗಳನ್ನು ನಡೆಸಿ ಮಕ್ಕಳಿಗೆ ಇಷ್ಟವಾದ ಕಥೆ ಹಾಡುಗಳನ್ನು ಹೇಳಿಕೊಡುವುದರಿಂದ ಮಕ್ಕಳನ್ನು ಆಕರ್ಷಿಸಬೇಕೆಂಬ ಉದ್ದೇಶದಿಂದ ಈ ಹಳ್ಳಿಯ ಗುರುಗಳು ಸಕಲ ಪ್ರಯತ್ನ ಪಡುತ್ತಾರೆ. ಇಂತಹ ಶಿಕ್ಷಕರು ಪ್ರತಿ ಹಳ್ಳಿಗೆ ನೇಮಕವಾಗುವುದು ಅಲ್ಲಿಯ ಪುಣ್ಯವೆಂದು ಹೇಳಬಹುದು.

ಹಳ್ಳಿ ಶಾಲೆಯ ದುರಾದೃಷ್ಟ ಎಂಬಂತೆ ಶಾಲೆಯ ಪ್ರಾರಂಭದಲ್ಲಿ ಬರುವ ಮಕ್ಕಳ ಆಸಕ್ತಿ ಕೊನೆಗೆ ಇರುವುದಿಲ್ಲ ಇದಕ್ಕೆ ಪರೋಕ್ಷವಾಗಿ ತಂದೆ ತಾಯಿಗಳೇ ಕಾರಣವಾಗುತ್ತಾರೆ. ಶಾಲೆಗೆ ಹೋಗಲು ಹಠ ಮಾಡುವ ಮಕ್ಕಳಿಗೆ ಪ್ರೋತ್ಸಾಹಿಸಿ ಶಾಲೆಗೆ ಕಳುಹಿಸುವ ಪ್ರಯತ್ನ ಮಾಡಬೇಕು. ನಮ್ಮ ಜನರು ಅವನು ಶಾಲೆ ಬಿಟ್ಟಿದ್ದು ಒಳ್ಳೆಯದೇ ಎಂಬಂತೆ ದನಕಾಯಲು, ಮನೆ ನೋಡಿಕೊಳ್ಳಲು, ತಮ್ಮ ತಂಗಿಯರನ್ನು ನೋಡಿಕೊಳ್ಳುವುದಕ್ಕೆ ಇರಿಸಿಕೊಳ್ಳುತ್ತಾರೆ. ಇದೇ ಹಳ್ಳಿಶಾಲೆಗಳ ಹಣೆಬರಹ. ಊರಿನ

ಹಿರಿಯರ ಹೋರಾಟ 'ಹೊಳೆಯಲ್ಲಿ ಹುಣಸೆ ಹಣ್ಣನ್ನು ತೊಯ್ದಂತೆ ಆಗುತ್ತದೆ'. ಶಾಲೆಗೆ ಮಕ್ಕಳು ಹೋಗದಿದ್ದರಿಂದ ನಮ್ಮ ಮಕ್ಕಳಿಗೆ ತೊಂದರೆ ಯಾಗುವುದು ಎಂಬ ಪರಿಜ್ಞಾನವು ನಮ್ಮ ಜನರಿಗೆ ಇರುವುದಿಲ್ಲ. ಹೇಗೂ ಗೌಡರ ಜಗುಲಿಯ ಮೇಲೆ ಶಾಲೆ ನಡೆಯುತ್ತಿದೆ ಎಂದುಕೊಂಡು ಸಮಾಧಾನದಲ್ಲಿ ಇರುವಾಗಲೇ ನಮ್ಮ ಹೆಂಗಸರು ಮಾಡುವ ಕುತಂತ್ರ ಹೇಳತೀರದು. ಈ ಜಗುಲಿ ಮೇಲೆ ಶಾಲೆಯನ್ನು ನಡೆಸಿ ನೆಮ್ಮದಿಯಲ್ಲಿದ್ದಾಗ ಚಾಡಿ ಮಾತಿಗೆ ಬಲಿಯಾಗಿ ಹಾಳುಮಾಡುವ ಮಂದಿ ಈ ಹಳ್ಳಿಗಳಲ್ಲಿ ಕಂಡುಬರುತ್ತಾರೆ. ಮಕ್ಕಳು ಉದ್ಧಾರವಾಗುವುದಿಲ್ಲ ಅವರ ಉದ್ಧಾರವು ಕೂಡ ಆಗುವುದಿಲ್ಲ.

ಈ ಹಳ್ಳಿಗಳಿಗೆ ಹಿಂದುಳಿದ ವರ್ಗದವರು ಏನಾದರೂ ಮೇಷ್ಟ್ರು ಆಗಿ ಬಂದರೆ ಅವರ ಸ್ಥಿತಿ ಹೇಳತೀರದು. ಆ ಮೇಷ್ಟ್ರರಿಗೆ ಗೌರವ ಎನ್ನುವುದೇ ಇರುವುದಿಲ್ಲ. ನೂರಾರು ಕೆಟ್ಟವರ ನಡುವೆ ಒಬ್ಬರಾದರೂ ಒಳ್ಳೆಯವರು ಇರುತ್ತಾರೆ ಎಂಬುವುದಕ್ಕೆ ಕಾಡಣ್ಣ ಹೆಂಡತಿ ಸಾಕ್ಷಿಯಾಗಿದ್ದಾನೆ. ದಿನಾಲೂ ಅವರಿಗೆ ಊಟ ಬಡಿಸುವಾಗಲೂ ಆ ಮೇಷ್ಟ್ರು ಸ್ವಲ್ಪ ಹಿಂಜರಿದರೆ ಆಕೆ ಒಂಟಿಯಾಗಿರುವ ನರಮನ್ಸನ ಜಾತಿಯೆಲ್ಲಾ ಒಂದೆ ಉಣ್ಣಿ ಸ್ವಾಮಿ.....' ಎಂದು ಇವತ್ತಿನಿಂದ ನೀವು ನಮ್ಮ ಮನೇಲಿ ಊಟ ಮಾಡಿ ಸಂಕೋಚ ಇಟ್ಕೋಬೇಡಿ, ಇದೂ ನಿಮ್ಮ ಮನೆನೇ ಅಂತ ತಿಳಿದುಕೊಳ್ಳಿ. ನಿಮಗೆ ನಮ್ಮ ಮನೆಯಲ್ಲಿ ಬಟ್ಟಿ ಉಣ್ಬೇಕು ಅಂತ ಅನ್ನಿಸಿದ್ರೆ ನೀವು ನಿಮ್ಮ ಊರ್ನಿಂದ ಅಕ್ಕಿ ಬೇಳೆ ತರ್ತೀರಲ್ಲ ಅದನ್ನೇ ನನಗೆ ಕೊಡಿ. ನಿಮಗೆ ಅದನ್ನೇ ಬೇಸಾಕ್ತೀನಿ" ಎನ್ನುತ್ತಿದ್ದಳು.

ಗಿರಿಯಮ್ಮ ಜಗುಲಿಯ ಮೇಲೆ ಶಾಲೆ ನಡೆಸಲು ಬಿಡದಿದ್ದಾಗ ಸರ್ಕಾರಿ ಜಾಗದಲ್ಲಿ ಗುಡಿಸಲನ್ನು ನಿರ್ಮಿಸಲು ಪ್ರಯತ್ನಿಸಿದರು. ಅದಕ್ಕೂ ವಿರುದ್ಧ ವ್ಯಕ್ತವಾಯಿತು. ಆದರೆ ಹಿಂಜರಿಯದೇ ಗುಡಿಸಲು ಸಿದ್ಧಗೊಳಿಸಿದರು. ಶಾಲೆಯೆಂಬುದು ದೇವಾಲಯವಿದ್ದಂತೆ ಎಂಬುದನ್ನು ಮರೆತು ಅಲ್ಲಿ ನೀಚ ಕೃತ್ಯಗಳನ್ನು ಮಾಡುತ್ತಿದ್ದರು. ಅದರ ಪಾವಿತ್ರ್ಯತೆಯನ್ನು ಸಂಪೂರ್ಣವಾಗಿ ಹಾಳು ಮಾಡಿದರು. ಈ ಊರಿಗೆ ಶಾಲೆ ಬೇಕೆಬೇಕು ಎಂದು ಸರ್ಕಾರೊಂದಿಗೆ ಒಡೆದಾಡಿ ವ್ಯಕ್ತಿ ಸತ್ತ ನಂತರ ಆ ಶಾಲೆಯ ಸ್ಥಿತಿ ಹೇಳತೀರದಂತೆ ಆಯಿತು. ಅಲ್ಲಿನ ಜನರಿಗೆ ಮಾಸ್ಟರ್ ಹತ್ತಿರ ಹೇಗೆ ನಡೆದುಕೊಳ್ಳಬೇಕು, ಪರೀಕ್ಷೆಯ ಮಹತ್ವವೇನು ಎಂಬುದನ್ನು ಅರಿಯದ ಮೂರ್ಖ ಜನರು. ತರಗತಿಯು ನಡೆಯುತ್ತಿರುವಾಗಲೇ ಮಧ್ಯದಿಂದ ಮಕ್ಕಳನ್ನು ಕರೆದುಕೊಂಡು ಹೋಗುವ ಪ್ರವೃತ್ತಿ ಬೆಳೆಸಿಕೊಂಡಿದ್ದರು.

ತಾತ್ಕಾಲಿಕವಾಗಿದ್ದ ಗುಡಿಸಲು ಮಳೆಯಿಂದಾಗಿ ಬಿದ್ದು ಅರಳಿಕಟ್ಟೆಯ ಮೇಲೆ ತರಗತಿಯನ್ನು ಆರಂಭಿಸುವ ಮಟ್ಟಕ್ಕೂ ಬಂದವು. ಆದರೂ ಅಲ್ಲಿನ ಜನರಿಗೂ ಸರ್ಕಾರಕ್ಕೂ ಒಂದು ಕಟ್ಟಡವನ್ನು ಕಟ್ಟಿಸಬೇಕೆಂಬ ಜವಾಬ್ದಾರಿಯೇ ಇಲ್ಲದೆ ಆ ಹಳ್ಳಿಗೂ

ನಮಗೂ ಯಾವುದೇ ಸಂಬಂಧವಿಲ್ಲದ ರೀತಿಯಲ್ಲಿ ವರ್ತಿಸುತ್ತಾರೆ. ಸರ್ಕಾರದ ನೀತಿಯನ್ನು ವಿರೋಧಿಸುವ ಸಾಹಸಕ್ಕೆ ಯಾರು ಕೈ ಹಾಕದೆ ಶಾಲೆಗಳು ಹಾಳಾಗುತ್ತ ಬರುತ್ತಿವೆ. ಈ ಕಾರಣದಿಂದಾಗಿ ಹಳ್ಳಿಯು ಶೈಕ್ಷಣಿಕವಾಗಿ ಕುಂದುತ್ತಾ ಬರುತ್ತಿವೆ ಎನ್ನಬಹುದು.

ಮೇಲ್ಕಂಡ ಕತೆಗಳನ್ನು ಗಮನಿಸಿದಾಗ ಕೆಲವು ಮಕ್ಕಳಿಗೆ ಓದಬೇಕೆಂಬ ತವಕವಿದ್ದರೂ ಅವರ ಆಸಕ್ತಿಗೆ ಕೈ ಜೋಡಿಸುವಂತಹ ತಂದೆತಾಯಿಗಳು ಇದ್ದಾರೆ ಎಂದು ಖುಷಿಯಾದರೆ, ಮತ್ತೊಂದು ಹಳ್ಳಿಯಲ್ಲಿ ಪ್ರಾಥಮಿಕ ಶಾಲೆಗಳ ವ್ಯವಸ್ಥೆಯಿರುವುದಿಲ್ಲ. ಇದ್ದರೂ ಅದಕ್ಕೆ ತನ್ನದೇ ಆದ ಕಟ್ಟಡವಿಲ್ಲದೆ ಜಗುಲಿ, ಅರಳಿಮರದ ಕಟ್ಟೆಯಲ್ಲಿ ಶಾಲೆಗಳು ನಡೆಯುತ್ತದೆ. ಕೆಲವು ಮೇಷ್ಟ್ರುಗಳು ಶಾಲೆಯನ್ನೇ ಲೇವಾದೇವಿ ಕಛೇರಿಯಾಗಿ ಮಾಡಿಕೊಂಡು ವಿದ್ಯಾರ್ಥಿಗಳನ್ನು ಅವರ ಸಹಾಯಕರಾಗಿ ಮಾಡಿಕೊಂಡಿದ್ದಾರೆ. ಇದನ್ನೆಲ್ಲಾ ನಾವು ಗಮನಿಸಿದಾಗ ಸರ್ಕಾರ ಪ್ರಾಥಮಿಕ ಶಿಕ್ಷಣಕ್ಕಾಗಿ ಕೋಟ್ಯಾಂತರ ರೂಪಾಯಿ ಖರ್ಚು ಮಾಡುತ್ತಿದ್ದರು ಏಕೆ ಇದು ಗ್ರಾಮಾಂತರಗಳಿಗೆ ತಲುಪುತ್ತಿಲ್ಲ ಮತ್ತು ಸರ್ಕಾರ ಏಕೆ ಶಾಲೆಗಳ ಸುಧಾರಣೆಯ ಕಡೆ ಗಮನ ಹರಿಸುವುದಿಲ್ಲ. ಇವರು ಮಾಡುವ ಅನ್ಯಾಯದಿಂದ ಅನೇಕ ರೀತಿಯ ಪ್ರತಿಭೆವುಳ್ಳ ಹೂಗಳು ಅರಳುವ ಮುನ್ನವೇ ಮುದುರಿಹೋಗುತ್ತಿವೆ. ಆದಷ್ಟು ಹಳ್ಳಿ ಶಾಲೆಗಳು ಮತ್ತು ಅಲ್ಲಿನ ಮಕ್ಕಳ ಕಡೆ ಸರ್ಕಾರ ಗಮನ ಹರಿಸಿದರೆ ಹಳ್ಳಿಗಾಡಿನ ಮಕ್ಕಳು ಪಟ್ಟಣದ ಮಕ್ಕಳಿಗಿಂತ ನಾವು ಕಡಿಮೆಯೇನಲ್ಲ ಎಂದು ತೋರಿಸುತ್ತಾರೆ. ಅವರಿಗೆ ನಮ್ಮ ಸಹಕಾರ, ಪ್ರೋತ್ಸಾಹ ಹೆಚ್ಚು ಅಗತ್ಯವಿರುವುದರಿಂದ ನಾವು ಗಮನಹರಿಸಬೇಕು ಎಂದು ಕರೀಗೌಡರ ಕತೆಗಳು ತಿಳಿಸುತ್ತವೆ.

# ಅಧ್ಯಾಯ – ೪

# ಕರೀಗೌಡ ಬೀಚನಹಳ್ಳಿಯವರ ಕಥೆಗಳಲ್ಲಿ ಗ್ರಾಮ್ಯಜೀವನ

ಡಾ. ಕರೀಗೌಡ ಬೀಚನಹಳ್ಳಿ ಅವರು ತಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಹುಲಿಯೂರು ಹೋಬಳಿಯ ಹಳೇವೂರು ದಾಖಲೆಗೆ ಸೇರಿದ ಬೀಚನಹಳ್ಳಿ ಗ್ರಾಮದವರು. ಮಂಡ್ಯ, ಬೆಂಗಳೂರು, ತುಮಕೂರು ಈ ಮೂರು ಜಿಲ್ಲೆಗಳ ಸರಹದ್ದುಗಳು ಕೂಡುವಲ್ಲಿ ಈ ಹಳ್ಳಿ ಇದೆ. ಅಲ್ಲಿನ ಮಣ್ಣಿನ ಸ್ಪರ್ಶದಿಂದ ಧನ್ಯತೆ ಪಡೆದವರು. ನಗರ ಪ್ರದೇಶಗಳಿಗೆ ನಿಕಟವಾಗಿದ್ದರೂ ಇವರು ನಗರಕ್ಕೆ ಮಾರುಹೋಗದೆ ಹಳ್ಳಿ ಮತ್ತು ಅಲ್ಲಿನ ಜನರ ಮೇಲೆ ಅಪಾರ ಅಕ್ಕರೆ ಇಟ್ಟುಕೊಂಡಿರುವವರು. ಹಳ್ಳಿಯ ಉದ್ಧಾರವಾದರೆ ದೇಶ ಉದ್ಧಾರವಾಗುತ್ತದೆ ಎಂಬ ನಂಬಿಕೆಯಿಟ್ಟುಕೊಂಡು ಅದಕ್ಕೆ ಶ್ರಮಿಸುತ್ತಿರುವವರು. ಹಳ್ಳಿಗಾಡಿನ ಜನರು ಹೃದಯ ಶ್ರೀಮಂತಿಕೆ ಹೊಂದಿರುವ ಅನುಕಂಪ, ಸಹಾನುಭೂತಿ, ಕರುಣಾಮಯಿಗಳಾಗಿರುತ್ತಾರೆ. ಸಂಪ್ರದಾಯಗಳ ಬೇರು ಇರುವುದು ಹಳ್ಳಿಗಳಲ್ಲಿ. ಅವುಗಳನ್ನು ಅಳಿಸದೆ ಉಳಿಸಿಕೊಂಡು ಬಂದಿರುವುದು ಈ ಹಳ್ಳಿಗಳು. ನಾವು ಓದಿ ಕೆಲಸಕ್ಕಾಗಿ ನಗರ ಪ್ರದೇಶಗಳಿಗೆ ಹೋಗಿದ್ದರೂ ತಾಯಿಯ ಬೇರು ಎಂಬ ಹಡೆದವ್ವ ಹಳ್ಳಿಯಲ್ಲಿ ನೆಲೆನಿಂತಿದ್ದಾಳೆ. ಅವಳ ಮಮಕಾರ ಸದಾಕಾಲದಲ್ಲೂತನ್ನ ಕವಲುಗಳ ಮೇಲಿರುತ್ತದೆ.

ಗ್ರಾಮಗಳಲ್ಲಿ ಕಡುಬಡತನ ಎದ್ದು ಕಾಣುತ್ತಿದ್ದು ಇದರ ನಡುವೆ ಬರುವ ಹಬ್ಬ ಹರಿದಿನಗಳಲ್ಲಿ ಒಂದಾದ ಪಿತೃಪಕ್ಷಗಳ ಆಚರಣೆ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ನಮ್ಮ ಗ್ರಾಮದಲ್ಲಿ ಜನರು ತಮಗೆ ಎಷ್ಟೆ ಕಷ್ಟವಾದರೂ ಕೂಡ ಒಂದು ವರ್ಷವು ಪಿತೃಪಕ್ಷ ಮಾಡದೆ ಬಿಡುವುದಿಲ್ಲ. ಒಂದು 'ಅಪೂರ್ವ ಸಂಸಾರ" ಕತೆಯಲ್ಲಿ ಪಿತೃಪಕ್ಷಕ್ಕಾಗಿ ಕಡುಬತಡನದ ರೇಖೆಯಲ್ಲಿರುವ ಮುಸ್ಲಿಂ ಕುಟುಂಬ ಪಡುವ ಸಂಕಷ್ಟದ ಚಿತ್ರಣ ಮೂಡಿಬಂದಿದೆ.

ನಮ್ಮ ಹಳ್ಳಿಗಳಲ್ಲಿ ಒಂದೇ ಕಸುಬು ಪ್ರಮುಖವಾಗಿದ್ದು ಅದನ್ನು ನಂಬಿಕೊಂಡು ಜೀವನ ನಡೆಸುವವರೆ ಹೆಚ್ಚು. ಪೈಪೋಟಿ ಯುಗದಲ್ಲಿ ನಾ ಮುಂದು ತಾ ಮುಂದು ಎಂದು ಬರುವ ಅವಕಾಶಗಳನ್ನು ಬಳಸಿಕೊಂಡು ಐಸಾರಾಮಿ ಜೀವನ ನಡೆಸುವುದು ಹೆಚ್ಚಾಗಿ ಕಂಡು ಬರುತ್ತದೆ. ತಂದೆ, ತಾಯಿ ಅಥವಾ ಪೂರ್ವಿಕರ ಯಾರೇ ತೀರಿಹೋದರು ಅವರಿಗೆ ವರ್ಷದ ಕೂಳನ್ನು ಹಾಕಬೇಕಾದುದು ನಮ್ಮ ಧರ್ಮವೆಂದು ಭಾವಿಸಿ ಅದಕ್ಕೆ ಬೇಕಾಗಿರುವ ಹಣ ಹೊಂದಿಸಲು ಪಡುವ ಪಾಡು ಕರುಣಾಜನಕ. ಹಳ್ಳಿಗಳಲ್ಲಿ ಕಿತ್ತು ತಿನ್ನುವ ಬಡತನ, ಅದರ ಮಧ್ಯೆದಲ್ಲಿ ಈ ಆಚಾರಗಳು, ಅವರನ್ನು ಜೀವಂತ ಶವಗಳಾಗಿ ಮಾಡುತ್ತವೆ.

ಹಳ್ಳಿಗಳಲ್ಲಿ ಅಲ್ಪಸಂಖ್ಯಾತರಾಗಿರುವ ಮುಸ್ಲಿಂ ಜನಾಂಗ ಕಡುಬಡವ-ರಾಗಿರುತ್ತಾರೆ. ಮನೆತುಂಬ ಮಕ್ಕಳು, ವ್ಯಾಪಾರವೇ ಅವರ ಮುಖ್ಯ ಉದ್ಯೋಗ-ವಾಗಿರುತ್ತದೆ. ಅದರಿಂದ ಬರುವ ಆದಾಯ ಮಾತ್ರ ಅಷ್ಟಕ್ಕೆ ಅಷ್ಟೆ ಇತ್ತೀಚೆಗೆ ಪ್ರತಿಯೊಂದರಲ್ಲೂ ಪೈಪೋಟಿ ಹೆಚ್ಚಾಗಿ ಕಂಡುಬರುತ್ತದೆ. ಬೆಸ್ತರು ಇದರಿಂದ ಲಾಭ ಪಡೆದಾಗ ಅವರ ವಿರುದ್ಧ ಸಿಟ್ಟುಗೊಂಡರು ಏನು ಪ್ರಯೋಜನವಾಗಲಿಲ್ಲ. ಇದು 'ಬಡವನ ಕೋಪ ದವಡೆಗೆ ಮೂಲ' ಎಂಬಂತೆ ವ್ಯರ್ಥ ಪ್ರಯತ್ನ. ಹಳ್ಳಿಯ ಗಂಡಸರು ಬೇಜಾಬ್ದಾವರಿ ಹೆಚ್ಚಾಗಿದ್ದು ದುಡಿದು ತರುವುದು ಅಷ್ಟರಲ್ಲೆ ಇದ್ದುದರಿಂದ ಮನೆಯ ಕೆಲಸಕ್ಕೆ ಹೋಗಿ ಅಲ್ಲಿ ಉಳಿದಿದ್ದನ್ನು ತಂದು ತನ್ನ ಮಕ್ಕಳಿಗೆ ಅವಳೇ ಉಣಬಡಿಸುತ್ತಿದ್ದಳು. ಅನ್ನ ಹಳಸೋಗಿದ್ದರು ಅದನ್ನು ತಿಂದು ಬದುಕುವರ ಸ್ಥಿತಿ ಹೆಚ್ಚಾಗಿ ಕಂಡುಬರುತ್ತದೆ. ಇಂತಹ ಸ್ಥಿತಿಯಲ್ಲಿದ್ದರು ವರ್ಷಕ್ಕೆ ಒಂದರಂತೆ ಆರು ಮಕ್ಕಳನ್ನು ಹೆತ್ತವರು ಇದ್ದಾರೆ. ಅವರು ಈ ಸ್ಥಿತಿಯಲ್ಲಿ ಅವಶ್ಯಕತೆಯಿಲ್ಲದಿದ್ದರೂ ಅದನ್ನು ಅರ್ಥಮಾಡಿಕೊಳ್ಳದೇ ಹೆರುವ ಜನರನ್ನು ಇಂದಿಗೂ ಕೂಡ ನಮ್ಮ ಹಳ್ಳಿಗಳಲ್ಲಿ ಇರುವುದನ್ನು ಕಾಣಬಹುದು.

ಹಳ್ಳಿಗಾಡಿನ ಮುಸ್ಲಿಂರು ಅಪರೇಷನ್ ಮಾಡಿಸಿಕೊಳ್ಳುವುದು ತಮ್ಮ ಧರ್ಮಕ್ಕೆ ಅವಮಾನ ಎಂದು ಭಾವಿಸಿ ಅಪರೇಷನ್ ಮಾಡಿಸಿಕೊಳ್ಳದ ಮುಸ್ಲಿಂ ಜನರಲ್ಲಿ ಇಂದಿಗೂ ಕಾಣಬಹುದಾಗಿದೆ. ಹೀಗೆ ಧರ್ಮಕರ್ಮ ಎಂದು ಮನೆ ತುಂಬ ಮಕ್ಕಳನ್ನು ಮಾಡಿಕೊಳ್ಳುತ್ತ ಮತ್ತೆ ನರಳುತ್ತಾರೆ. ಮನೆಯ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತಿರುವ ಹೆಣ್ಣು ಊರಿನ ಗೌಡರ ತೋಟಕ್ಕೆ ಹೋಗಿ ಅಲ್ಲಿ ತಿನ್ನಲು ಕೊಟ್ಟ ಪರಂಗಿ ಹಣ್ಣನ್ನು ಎರಡು ಹೋಳು ಮಾಡಿ ಮಗಳ ಕೈಯಲ್ಲಿ ಹನ್ನೆರಡು ಚೂರ್‌ನ್ನು ಹತ್ತು ಪೈಸೆಯಂತೆ ಮಾರಲು ಹೇಳಿದಳು. ಇಲ್ಲಿ ತಿನ್ನುವ ಹಣ್ಣನ್ನು ಮಾರಿ ಜೀವನ ನಡೆಸಬೇಕಾದ ಸಂದರ್ಭ ಹಳ್ಳಿಗಳಲ್ಲಿ ಬಂದು ಒದಗಿದೆ.

ಸಹಾಯ ಮನೋಭಾವನೆ ಹೊಂದಿದ ನಿಂಗೇಗೌಡರು ಕಡುಬಡವನಾದ ಸಾಬುಲಾಲುವಿನ ಮಕ್ಕಳಿಗೆ ಬೆಂಗಳೂರಿನಲ್ಲಿದ್ದ ಅಜಾದ್ ಸೈಕಲ್ ಷಾಪಿನ ಯಜಮಾನರಿಗೆ ಹೇಳಿಸಿ ಅಲ್ಲಿ ಸೇರಿದ್ದರು. ಆಮೇಲೆ ತನ್ನ ಹೆಂಡತಿಗೆ ನಿಂಗೇಗೌಡರ ಮುಖಾಂತರವೇ ಬೆಂಗಳೂರಿನ ಹೊರವಲಯದಲ್ಲಿದ್ದ ಪೊಲೀಸ್ ಪೇದೆಗಳ ತರಬೇತಿ ಕೇಂದ್ರ ಹಾಸ್ಟೆಲ್‌ನಲ್ಲಿ ಅಡಿಗೆ ಕೆಲಸಕ್ಕೆ ಸೇರಿಸಿ ಜೀವನ ನಡೆಸಲು ಒಂದು ವ್ಯವಸ್ಥೆ ಮಾಡಿದರು ಕೂಡ ತಂದೆಗೆ ವರ್ಷದ ತಿಥಿಗೆ ಒಳ್ಳೆಯ ಅಡುಗೆ ಮಾಡಲು ಆಗುತ್ತಿರಲಿಲ್ಲ. ಈ ವಿಚಾರವಾಗಿ ತಲೆಕೆಡಿಸಿಕೊಂಡು ಕೊರಗುವ ಹೆಣ್ಣಿನ ಸ್ಥಿತಿ ಚಿಂತಾಜನಕವಾಗಿ ಮೂಡಿಬಂದಿದೆ.

ನಗರಪ್ರದೇಶಕ್ಕೆ ನಿಕಟವಾಗಿರುವ ಈ ಹಳ್ಳಿಗಳಲ್ಲಿ ಅನೇಕ ಬದಲಾವಣೆಯನ್ನು ನಾವು ಕಾಣುತ್ತೇವೆ. ಬೆಂಗಳೂರಿನ ಅಕ್ಕ ಪಕ್ಕದಲ್ಲಿದ್ದರೂ ಇನ್ನೂ ಫ್ಯಾಷನ್‌ಗೆ ಅಂಟಿಕೊಳ್ಳದ ರೀತಿಯಲ್ಲಿತ್ತು ಅಲ್ಲಿನ ಜನ ಆಚಾರ-ವಿಚಾರ, ಉಡಿಗೆ-ತೊಡುಗೆಗಳಲ್ಲಿ ಇನ್ನೂ ಶಿಲಾಯುಗದ ಜನಗಳ ತರಹ ಇದ್ದಾರೆ. ಬೆಂಗಳೂರು ದಿನೇ ದಿನೇ ಸುತ್ತ ಮುತ್ತಲಿನ ಊರುಗಳನ್ನೆಲ್ಲಾ ತನ್ನೊಳಕ್ಕೆ ಸೇರಿಸಿಕೊಳ್ಳುತ್ತಲೇ ಇತ್ತು. ಸೇರಿಸಿಕೊಂಡ ಹಳ್ಳಿಯ ಜನಗಳನ್ನೆಲ್ಲಾ ಬದಲಾವಣೆಯಾಗುತ್ತಿದ್ದರು. ಬದಲಾವಣೆಗಳಿಗೆ ಮೈಯೊಡ್ಡುವಾಗ ಜನಗಳಲ್ಲಿ ಆಗುತ್ತಿದ್ದ ಪಜೀತಿ ಅಷ್ಟಿಷ್ಟಲ್ಲ. ಪಂಚೆ ಉಡುತ್ತಿದ್ದವರು ಪ್ಯಾಂಟು ಹಾಕುವುದಕ್ಕೂ ಚಡ್ಡಿ ಹಾಕುತ್ತಿದ್ದವರು ಪಂಚೆ ಉಡುವುದಕ್ಕೂ ಶುರುವಾಗಿತ್ತು. ಹೆಂಗಸರ ಮುಖ ಮೈಮೇಲೆಲ್ಲಾ ಅನೇಕ ತರದ ಬದಲಾವಣೆಗಳು ನಡೆಯುತ್ತಲೇ ಇದ್ದವು. ವ್ಯವಸಾಯ ಮಾಡುತ್ತಿದ್ದವರು ವ್ಯವಸಾಯ ಬಿಟ್ಟರು. ಇದ್ದ ಬದ್ದ ಆಸ್ತಿಯನ್ನೆಲ್ಲ ಮಾರುತ್ತಾ ಅದರಿಂದ ಕಾಂಕ್ರೀಟ್ ಮನೆಗಳನ್ನು ಕಟ್ಟಿ ಬಾಡಿಗೆಗೆ ಕೊಡುವುದು. ಬಂದ ಬಾಡಿಗೆಯಲ್ಲಿ ಅದ್ದೂರಿ ಜೀವನ ನಡೆಸಲು ಪ್ರಯತ್ನಿಸುತ್ತಿದ್ದರು. ಮತ್ತೆ ಕೆಲವರು ಅಲ್ಲಿಯೂ ಸಲ್ಲದೆ, ಇಲ್ಲಿಯೂ ಸಲ್ಲದೆ ತ್ರಿಶಂಕು ಸ್ಥಿತಿಯಲ್ಲಿದ್ದರು. ಓದಿದವರಿಗಿಂತ ತಾವು ಯಾವುದರಲ್ಲಿ ಕಡಿಮೆ ಅಂತ ನಗರದ ಆಡಂಬರದ ನಾಗರೀಕತೆಯನ್ನೆಲ್ಲಾ ತಮ್ಮ ಮನೆಗಳಲ್ಲಿ ತುಂಬುತ್ತಾ ನಡೆದಿದ್ದರು.

ನಗರ ಸಂಪರ್ಕವಿರುವ ಜನತೆ ಮಾರುಹೋಗದೆ, ತಮ್ಮದೇ ಆದ ಸುಸಂಸ್ಕೃತಿಯನ್ನು ಉಳಿಸಿಕೊಂಡಿರುವುದನ್ನು ನಾವು ಕಾಣಬಹುದು. ಉದಾಹರಣೆಗೆ ಹಳ್ಳಿಯಲ್ಲಿರುವ ಮುಸ್ಲಿಂರು ತಮ್ಮ ಆಚಾರ ವಿಚಾರ, ಉಡಿಗೆ, ತೊಡುಗೆಗಳಲ್ಲಿ ಬದಲಾವಣೆ ಹೊಂದಿರಲಿಲ್ಲ. ಅವರಲ್ಲಿ ಬುರ್ಖಾ, ನಮಾಜು ಎಂದಿನಂತೆ ಇನ್ನೂ ಇತ್ತು.ಇಲ್ಲಿ ಬೆಳಿಗ್ಗೆಯಿಂದ ಸಂಜೆಯವರೆಗೆ ಕೆಲಸ ಮಾಡುವವರು ಸಾರಾಯಿ ಕುಡಿಯಬೇಕು ಎನ್ನುವುದು ಸಹಜವಾಗಿದ್ದರಿಂದ ಅವರು ಕುಡಿಯಲು ಹೆಂಡವನ್ನು ತಿನ್ನಲು ಮೀನನ್ನು ತೆಗೆದುಕೊಳ್ಳುತ್ತಿದ್ದರು. ಈ ಪರಿಯ ಬದುಕಿನಲ್ಲಿ ತನ್ನ ತಂದೆ ವರ್ಷದ ತಿಥಿಯನ್ನು ಮಾಡಲು ಸಾಧ್ಯವಾಗದೆ ನರಳುವ ಜೀವಿಗಳನ್ನು ನಾವು ಕಾಣಬಹುದು.

'ಅರಣ್ಯ' ಕತೆಯಲ್ಲಿ ಹಳ್ಳಿಯಲ್ಲಿ ನಡೆಯುವ ಅನ್ಯಾಯದ ಚಿತ್ರವನ್ನು ನೋಡಬಹುದು. ರಾಜ ಹೊಸೂರಿನ ಛೇರ್ಮನ್ ಲಿಂಗೇಗೌಡರ ಮಗ, ಮಬ್ಬಿಗೆ ಕೆರೆತಾವಿಗೆ ಬಂದು ಶೌಚಕ್ಕೆ ಹೋಗಿ ಶುದ್ಧಿ ಮಾಡಿಕೊಳ್ಳಲು ಕೆರೆಯ ಹತ್ತಿರ ಬಂದಾಗ ತೇಲಾಡುತ್ತಿದ್ದ ಹೆಣ ನೋಡಿ ಆಶ್ಚರ್ಯ ಪಟ್ಟು ಹಿಂದೆ ಮುಂದೆ ಜಗ್ಗಾಡಿದ ಮನಸ್ಸಿಗೆ ಧೈರ್ಯ ತುಂಬಿ ನೋಡಿದ್ದ ಹಳೆವೋರಿನ ನಿಂಗಕ್ಕನ ಮಗಳು ಚೆನ್ನಿ ಮನೆ ಬಿಟ್ಟು ಆಗಲೇ ಮೂರು ದಿನವಾಗದಂತೆ ಅವರವ್ವ ಎಲ್ಲೋ ಹುಡುಕಿಕೊಂಡೋಗವಳಂತೆ

ಅಂತ ನಿನ್ನೆ ಮದ್ಯಾಹ್ನ ಮಾರಮ್ಮನ ತೇರಿನ ಮೇಲೆ ಚೌಕಾಬಾರ ಆಡುತ್ತಾ ಭೈರ ಅಂದಿದ್ದನ್ನು ರಾಜ ನೆನಪು ಮಾಡಿಕೊಂಡು ಚಡ್ಡಿ ಕಟ್ಟಿಕೊಂಡು ಹಾಗೇ ಹಳೆವೂರಿನ ಕಡೆಗೆ ಓಡಿ ಬಂದಿದ್ದ.

ಹಳ್ಳಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವುದು ಛೇರ್ಮನ್, ಪಟೇಲ್, ಶ್ಯಾನುಬೋಗರ ಮಕ್ಕಳದ್ದೇ ದರ್ಬಾರ್ ಹೆಚ್ಚಾಗಿರುತ್ತದೆ. ಅಧಿಕಾರದ ಅಹಂ ಅಥವಾ ಶ್ರೀಮಂತಿಕೆಯ ಅಹಂನಿಂದಾಗಿ ಬಡವರ ಹೆಣ್ಣು ಮಕ್ಕಳೊಂದಿಗೆ ದೇಹ ಸಂಪರ್ಕವಿಟ್ಟುಕೊಂಡು ತಮಗೆ ಬೇಕಾಗುವವರೆಗೂ ಬಳಸಿಕೊಳ್ಳುವರು ಎಲ್ಲಿ ನಮ್ಮ ಗುಟ್ಟು ರಟ್ಟಾಗುತ್ತದೆ ಎಂದು ಗೊತ್ತಾದಾಗ ತಕ್ಷಣ ನಮಗೂ ಅವಳಿಗೂ ಯಾವುದೇ ಸಂಬಂಧವಿಲ್ಲ ಎಂಬಂತೆ ಆರಾಮವಾಗಿ ಓಡಾಡಿಕೊಂಡಿರುತ್ತಾರೆ. ಅವರು ಸಮಾಜದ ದೃಷ್ಟಿಯಲ್ಲಿ ದೊಡ್ಡ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಬಡವರ ಕತೆಯಂತೂ ಹೇಳತೀರದು. ಏನು ಅರಿಯದ ಮುಗ್ಧ ತಂದೆತಾಯಂದಿರು ಈ ಅವಮಾನದಿಂದ ತಲೆ ಎತ್ತದ ಸ್ಥಿತಿಯನ್ನು ತಲುಪುತ್ತಾರೆ.

"ಕದ್ದು ಬಸಿರಾಗಿತ್ತು' ಅದ್ಕೆ ಅದು ಅಂಗೆ ಮಾಡ್ಕೊಂಡದೆ" ಎಂದು ಆಗ ಪಟೇಲರು 'ಆ ಹುಡ್ಗಿಯಾ?' ಅಂದು, 'ಯಾರ್ಲ ಅವನು? ಅವಳ್ನ ಕೆಡಿಸ್ದೋನು – ಬಡ್ಡಿಮಗ? ಎಂದು ತಮ್ಮ ದಡಿಗಂಟಲನ್ನು ತೆಗೆದರು. ಚೆನ್ನಣ್ಣ 'ಅದೇ ಭ್ಯರಣ್ಣ ಅಂತೆ! ನಿಮ್ಮಣ್ಣೋರ ಮಗ' ಅಂದ ಆಗ ಪಟೇಲರ ಗಂಟಲು ಇದ್ದಕ್ಕಿದ್ದಂತೆ ಸಣ್ಣಗಾಯಿತು. 'ಅನ್ಲೆ ಹಿಂಗೆಲ್ಲಾ ಊರ್ನಲ್ಲಿ ಮಾಡೋ ಅಷ್ಟು ಮುಂದ್‌ವರ್ದ್ ಬಿಟ್ನಾ ನಾನ್ ಹುಟ್ಟಿದ್ ಹುಡುಗ ಅಂದು ಅನ್ನುತ್ತಿದ್ದ ಹಾಗೆಯೇ ಕಡೆಯಲ್ಲಿ ಹೊರಟ ಮಾತು ಇದ್ದಕ್ಕಿದ್ದಂತೆ ಈಚೆ ಬಂದಾಗ ಸುತ್ತ ಮುತ್ತ ನೋಡಿದರು ಅಲ್ಲಿ ಚೆನ್ನಣ್ಣನ ಬಿಟ್ಟು ಮತ್ತೆ ಯಾರೂ ಇರದಿದ್ದಾಗ ಸಮಾಧಾನದ ಉಸಿರು ಬಿಟ್ಟು ಸುಮ್ಮನಾದರು.

ಇಲ್ಲಿ ಆಕೆಯ ಬಸುರಿಯಾಗಿರುವುದಕ್ಕೆ ಯಾರು ಕಾರಣವೆಂದು ತಿಳಿದಿದ್ದರು ಕೂಡ ಏನು ಮಾಡದ ಪರಿಸ್ಥಿತಿಯನ್ನು ಎದುರಿಸಬೇಕಾಗುತ್ತದೆ. ಬಡವ ಮಾಡುವ ತಪ್ಪುಗಳು ಬಹು ಬೇಗ ಬೀದಿಗೆ ಬರುತ್ತವೆ. ಆದರೆ ಶ್ರೀಮಂತರು ಮಾಡುವ ತಪ್ಪುಗಳು ಶ್ರೀಮಂತಿಕೆಯಲ್ಲಿ ಮುಚ್ಚಿ ಹೋಗುತ್ತವೆ. ಹೀಗೆ ದೊಡ್ಡ ಮನುಷ್ಯರು ತಮ್ಮ ಹಣದ ದರ್ಪದಿಂದ ಹಳ್ಳಿಯ ಅನೇಕ ಅಮಾಯಕರ ಬಾಳಿನ ಜೊತೆಯಲ್ಲಿ ಆಟವಾಡಿ ಅವರಿಗೆ ದುಃಸ್ಥಿತಿಯನ್ನು ತಂದು ಒದಗಿಸುತ್ತಾರೆ. ಇಂತಹ ಕೃತ್ಯಗಳು ಹಳ್ಳಿಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಈ ಕೃತ್ಯಗಳಿಗೆ ಒಳಗಾದ ಮಕ್ಕಳ ತಿಥಿ ಕಾರ್ಯವನ್ನು ಕೂಡ ಮಾಡಲಾಗದ ಪರಿಸ್ಥಿತಿಯಲ್ಲಿರುವಾಗ, ಯಜಮಾನನ್ನು ಪ್ರತಿಭಟಿಸುವುದು ಹೇಗೆ ಸಾಧ್ಯ.

ಮೂಢನಂಬಿಕೆಗಳು ಹೆಚ್ಚಾಗಿ ಕಂಡುಬರುವುದು ಗ್ರಾಮಗಳಲ್ಲಿ ಜನರು ಬಸುರಿಯಾಗಿ ನೀರಿಗೆ ಬಿದ್ದು ಸಾಯುವ ಹೆಣ್ಣು ಮಗಳ ಸಂಸ್ಕಾರದ ಬಗ್ಗೆ ಚರ್ಚೆ

ನಡೆಯುತ್ತದೆ. ನಾನೂ ಹುಟ್ಟಿದಾಗಿನಿಂದ ನೋಡಿದ್ದೀನಿ ಬಸಿರಾಗಿ ಸತ್ತ ಹೆಣ್ಮಕ್ಕಳನ್ನು ಈ ಸುತ್ತೆಲ್ಲಾ ಬೆಂಕಿಗಾಕಿಲ್ಲ. ನೆಲಕ್ಕೂ ಹೂಳಂಗಿಲ್ಲ, ಅಂಗ್ ಮಾಡ್ಲೂ ಬಾರ್ದು ಇದು ಸಿದ್ರಾ ಸ್ಥಳ. ಅಂಗೇನಾದ್ರು ಹೆಚ್ಚು ಕಡಿಮೆ ಮಾಡಿದ್ರೆ "ತಲೆ ಸಿಡಿದು, ರಕ್ತ ಕಕ್ಕಿ ಸಾಯ್ಬೇಕಾಗ್ತದೆ" ಮತ್ತೊಬ್ಬರು ಅಂಗಲ್ಲ ತಾತೋರೆ ಈ ಹುಡ್ಗಿ ಏನಾದ್ರು ಮದುವೆ ಆಗಿ ಬಸಿರಾಗಿ ಸತ್ತವಳ! ಅಂಗೆಲ್ಲಾ ಮಾಡಕ್ಕೆ?" ಎಂದರೆ ಹೊಟ್ಟೆಯೊಳಗೆ ಮಗು ಇರುವುದರಿಂದ ಬಸಿರಿ ಹೆಣನ ಇಲ್ಲಿವರ್ಗೂ ಯಂಗ್ ಮಡ್ತಾ ಬಂದಿದ್ದೀರಿ–ಹಾಗೆನೇ ಇದ್ಕೂ ಮಾಡ್ ಬಂದ್ರಲ' ಎಂದು ಹೇಳಿದರು.

048732

"ಈಗ ಮಸಲ ಅದಕ್ಕೆ ಯಾವುದೇ ಒಂದು ರೂಪ ಇದೆ ಅನ್ನಿ ಅಥವಾ ಯಾವುದೋ ಒಂದು ರೂಪಧರಿಸಿ ಬಂತೂ ಅನ್ನಿ ಅವಾಗ ದೆವ್ವ ಈ ರೂಪದಲ್ಲಿ ಬಂದಿದೇ ಅಂತ ನಾವು ತಿಳಿಯೋದು ಹೇಗೆ" ಎಂದು 'ಕಿರಗೂರಿನ ಗಯ್ಯಾಳಿಗಳು' ಬಗ್ಗೆ ದೆವ್ವದ ಬಗ್ಗೆ ತಮ್ಮ ವಿಚಾರಧಾರೆ ನೀಡಿದ್ದಾರೆ.[೧]

ಅನೈತಿಕ ಸಂಬಂಧ ಹೊಂದಿ ಬಸುರಿಯಾಗಿ ಕೆರೆಗೋ ಬಾವಿಗೋ ಬೀಳುವ ಹೆಣ್ಣು ಮಕ್ಕಳನ್ನು ಹೆಣದ ಮಾಳದ ಗುಡ್ಡೆಯ ಬುಡಕ್ಕೆ ಕೂರಿಸಿ ಅದಕ್ಕೆ ಸ್ನಾನವಿಲ್ಲದೆ ಸಿಂಗಾರವಿಲ್ಲದೆ ಓಲಗದ ಆರ್ಭಟವಿಲ್ಲದೆ ನವಿಲುಕಲ್ಲು ಒರಗಿಸಿ ಅದಕ್ಕೆ ಸೊಪ್ಪಿನಿಂದ ಮುಚ್ಚಿಸಿ ಊರದಾರಿ ಹಿಡಿಯುವ ವಾಡಿಕೆ ರೂಢಿಯಲ್ಲಿತ್ತು. ಇಲ್ಲಿನ ಜನರು ಶೈಕ್ಷಣಿಕವಾಗಿ ಮುಂದುವರಿಯುತ್ತಿದ್ದರು, ಅರ್ಥವಿಲ್ಲದ ಅನಾಚಾರಗಳು ನಡೆಯುತ್ತಲೇ ಇದೆ. ಇದನ್ನು ಪ್ರತಭಟಿಸುವ ಜನರು ಹಳ್ಳಿಗಳಲ್ಲಿ ಕಂಡುಬರುವುದಿಲ್ಲ. ಇಂತಹ ವ್ಯವಸ್ಥೆಗಳು ಸುಧಾರಿಸಲಿಲ್ಲವೆಂದರೆ ಬಡವರ ಹೆಣ್ಣು ಮಕ್ಕಳು ಶ್ರೀಮಂತರ ಕೈವಶವಾಗಿ ತಮ್ಮ ಶೀಲವನ್ನು ಕಳೆದುಕೊಂಡು ಈ ರೀತಿಯ ದುಃಸ್ಥಿತಿ ತಂದುಕೊಳ್ಳುತ್ತಾರೆ. ಇಂತಹ ಸ್ಥಿತಿಗೆ ಸಿಲುಕದೆ ಹಳ್ಳಿಯ ಹೆಣ್ಣುಮಕ್ಕಳು ಕೂಡ ಜಾಗೃತವಾಗಬೇಕು ಅಲ್ಲಿ ನಡೆಯುವ ಅನ್ಯಾಯವನ್ನು ಪ್ರತಿಭಟಿಸುವ ಧೈರ್ಯವನ್ನು ಬೆಳೆಸಿಕೊಳ್ಳಬೇಕು. ಆಗ ಮಾತ್ರ ಹಳ್ಳಿಗಳಲ್ಲಿ ಇದಕ್ಕೆ ತಿಲಾಂಜಲಿ ಇಡಲು ಸಾಧ್ಯ.

ಹಳ್ಳಿಗಳಲ್ಲಿ ವ್ಯವಸಾಯ, ಪಶುಪಾಲನೆ ಮುಖ್ಯವಾಗಿದ್ದು, ಅದನ್ನು ನಂಬಿಕೊಂಡ ವ್ಯಕ್ತಿ ತನ್ನ ಸಂಸಾರ ನಡೆಸಲು ಪಡುವ ಯಾತನೆ 'ಒಡಲ ತವಕ' ಕತೆಯಲ್ಲಿ ನಮಗೆ ವ್ಯಕ್ತವಾಗುತ್ತದೆ. ಬೀಚನಹಳ್ಳಿ ನೂರು ನೂರಿಪ್ಪತ್ತು ಹಳ್ಳಿಗಳ ಗ್ರಾಮ. ಸದರಿ ಊರಿನಲ್ಲಿ ಹೊಲೆಯರ ಸೂರುಗಳನ್ನು ಶಾಸ್ತ್ರಕ್ಕೆ ನೋಡ್ತೀನಿ ಅಂದರೂ ಸಹ ಒಂದೂ ಇಲ್ಲ. ಲೆಕ್ಕಕ್ಕೆ ಒಂದೆರಡು ಒಡ್ಡರ, ಇತರೆ ಸಣ್ಣಮುಟ್ಟ ಜಾತಿಗಳ ಕೆಲವು ಮನೆಗಳನ್ನು ಬಿಟ್ಟರೆ ಇನ್ನುಳಿದ ಮನೆಗಳೆಲ್ಲಾ ಒಕ್ಕಲಗೇರಿವೇ. ಊರಿನಲ್ಲಿ ಎಲ್ಲೋ ಐದಾರು ದೊಡ್ಡ ದೊಡ್ಡ

೧. ತೇಜಸ್ವಿ ಕಥನ, ಟಿ.ಪಿ.ಅಶೋಕ ಅಕ್ಷರ ಪ್ರಕಾಶನ, ೨೦೦೪, ಪು. ೬೭

ಕುಳಗಳನ್ನು ಬಿಟ್ಟರೆ ಉಳಿದ ಯಾವ ಸಂಸಾರಗಳೂ ಯಾವುದರಲ್ಲೂ ಸುಧಾರಿಸಿಯೇ ಇಲ್ಲ.

ಒಕ್ಕಲಿಗರು ಇರುವ ಈ ಹಳ್ಳಿಯಲ್ಲಿ ವ್ಯವಸಾಯವೇ ಅವರ ಕುಲ ಕಸುಬಾಗಿರುತ್ತದೆ. ಇವರಿಗೆ ಇರುವ ಜಮೀನು ಅಷ್ಟಕ್ಕೆ ಅಷ್ಟೇ ಇರುವ ಒಂದು ಎಕರೆಯೂ ಕಲ್ಲು ನೆಲವಾಗಿದ್ದು, ಜೊತೆಗೆ ಈ ಕಲ್ಲು ನೆಲದಲ್ಲಿ ಒಂದು ಬಾವಿಯನ್ನು ತೆಗೆಯಲು ಹೋದಾಗ ಅದು ವಿಫಲವಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ. ಅದಕ್ಕೆ ಅವನು ಎಲ್ಲವನ್ನು ಕೈಬಿಟ್ಟು ಏನಾಗುತ್ತದೋ ಅದೇ ಬೆಳೆಯನ್ನು ಬೆಳೆಯುತ್ತಾನೆ. ಎಷ್ಟು ಫಸಲು ಬರುತ್ತದೋ ಅದೇ ತಮ್ಮ ಅದೃಷ್ಟವೇ ಇಷ್ಟೆಂದು ತಿಳಿದುಕೊಂಡು ಸುಮ್ಮನಾಗುವ ಜಾಯಮಾನ ನಮ್ಮ ಹಳ್ಳಿಗಾಡಿನ ಜನರದ್ದು. ದೇವರ ಕೃಪೆ-ಯಿಂದಲೋ ಏನೋ ಒಂದು ಹೋರಿಯಿದ್ದಾಗ ಅದರ ಸಂಸಾರ ನಿರ್ವಹಿಸಿಕೊಂಡು ಹೋಗಲು ಸಾಧ್ಯವಾಯಿತು.

ಕಷ್ಟ ಬಂದವರಿಗೆ ಬರುತ್ತದೆ ಎಂಬುದು ಹಳ್ಳಿಗಾಡಿನಲ್ಲಿ ನಿಜವಾಗುತ್ತದೆ. ಬಹಳ ದೊಡ್ಡದಾದ ಕುಟುಂಬ ಜೊತೆಗೆ ರೋಗಗಳಿಗೆ ತುತ್ತಾದ ಹೆಂಡತಿಯಿದ್ದಾಗ ಯಜಮಾನ ಅನುಭವಿಸುವ ಕಷ್ಟ ಹೇಳತೀರದು. ಹಳ್ಳಿಗಾಡಿನ ಜನರಲ್ಲಿ ಸಾಮಾನ್ಯವಾಗಿ ಕಂಡುಬರುವ ರೋಗ ಎಂದರೆ ದಮ್ಮು. ಇದು ಅವಳ ಸಂಪೂರ್ಣ ಜೀವನವನ್ನೇ ನಾಶ ಮಾಡಿದೆ. ಹೆಂಡತಿ ತನ್ನ ಮಕ್ಕಳಿಗೆ ತಾಯಾಗಿರಲಿ ಎಂಬ ಹೆಬ್ಬಕೆಯನ್ನು ಇಟ್ಟುಕೊಂಡು, ಹೋರಿಯಿಂದ ಬರುತ್ತಿದ್ದ ಹಣವನ್ನೆಲ್ಲಾ ಖಾಯಿಲೆಗಾಗಿ ವ್ಯಯ ಮಾಡುವುದನ್ನು ಕಾಣಬಹುದಾಗಿದೆ. ಇಷ್ಟು ಕಷ್ಟದಲ್ಲೂ ತನ್ನ ಮಕ್ಕಳನ್ನು ನನ್ನಂತೆ ಅವಿದ್ಯಾವಂತರಾಗಬಾರದು ಅವರನ್ನು ಚೆನ್ನಾಗಿ ಓದಿಸಬೇಕೆಂಬ ಆಸೆ ಹೊತ್ತಿರುವ ರೈತನ ಗುಣ ಮೆಚ್ಚುವಂತಹದು.

ಸಾಮಾನ್ಯವಾಗಿ ಹಳ್ಳಿಗಳಲ್ಲಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕಿಂತ ಗಂಡು ಮಕ್ಕಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡುವುದು ಕಂಡುಬರುತ್ತದೆ. ಆದರೆ ವಿಧಿವಸವೆಂಬಂತೆ ಹೆಣ್ಣು ಮಗಳೇ ಚೆನ್ನಾಗಿ ಓದಿದ್ದು ಈತನಿಗೆ ಮತ್ತಷ್ಟು ಖುಷಿ ಕೊಡುತ್ತದೆ. ಇಲ್ಲಿ ರೈತನಿಗೆ ಕಷ್ಟದ ಮೇಲೆ ಕಷ್ಟ ಬಂದು ಒದಗುತ್ತದೆ. ಅನಾರೋಗ್ಯದ ತನ್ನ ಹೆಂಡತಿ ಸಾವನ್ನಪ್ಪುತ್ತಾಳೆ ಜೊತೆಗೆ ತನ್ನ ಜೀವನಾಧಾರವಾಗಿದ್ದ ಹೋರಿಯು ಕೂಡ ಕೊನೆಯುಸಿರೆಳೆದಾಗ ದಿಕ್ ತೋಚದೆ ಕಂಗಾಲಾಗುತ್ತಾನೆ.

ಒಂದು ಎಕರೆ ಭೂಮಿ ಜೊತೆಗೆ ಒಂದು ಹೋರಿ ಇಟ್ಟುಕೊಂಡು ಜೀವನ ಸಾಗಿಸುತ್ತಿದ್ದ ರೈತನಿಗೆ ಹೆಂಡತಿ ಮತ್ತು ಹೋರಿ ಸತ್ತಿದ್ದು ದೊಡ್ಡ ಆಘಾತವಾಗಿ ಪರಿಣಮಿಸಿತ್ತು. ಈ ಕುಟುಂಬವನ್ನು ನೋಡಿದ ಪ್ರತಿಯೊಬ್ಬರಿಗೂ ಮನ ಮರುಗುತ್ತಿತ್ತು. ಒಪ್ಪಾರುನಲ್ಲಿ ಇದ್ದ ಸಿದ್ದೇಗೌಡನು ಆ ಒಪ್ಪಾರು ಕೂಡ ಮುಂಗಾರು

ಮಳೆಗಳಿಗೆ ಅಲ್ಲಾಡುವ ಸೂರು ಇಂತಹ ಸ್ಥಿತಿಯಲ್ಲಿದ್ದ ಕುಟುಂಬದಲ್ಲಿ ತಬ್ಬಲಿಗಳಾದ ಮಕ್ಕಳು. ಮನೆಯಲ್ಲಿ ಕಿತ್ತು ತಿನ್ನುವ ಬಡತನದಲ್ಲಿ ಹೆಂಡತಿಯ ತಿಥಿಗಾಗಿ ಇರುವ ಒಂದು ಒಪ್ಪಾರನ್ನು ಬೋಗ್ಯಕ್ಕೆ ಮಾಡಿ ಈ ಕಾರ್ಯವನ್ನು ನಡೆಸುತ್ತಾನೆ.

ಆದಾಯ ಕಾಣದ ಕುಟುಂಬ, ಬೆಳೆದು ನಿಂತ ಮಗಳು ಜೊತೆಗೆ ಹಳ್ಳಿಯ ಪೋಲಿ ಹುಡುಗರ ಕಣ್ಣು ಮಗಳ ಮೇಲೆ. ಇಂತಹ ಸ್ಥಿತಿಯಲ್ಲಿ ಆ ಗೌಡ ಇದ್ದು ಸತ್ತ ಹಾಗೇ ಜೀವಿಸುತ್ತಿದ್ದ. ಈ ಬಡವರಿಗೆ ಹೆಣ್ಣು ಹುಟ್ಟುವುದೇ ಪಾಪವೆಂಬಂತೆ, ವರದಕ್ಷಿಣೆಯಿಲ್ಲದೆ ಮದುವೆಗೆ ಒಪ್ಪದೆ, ಮದುವೆಯ ಲಗ್ನ ಮುಗಿಯುತ್ತಾ ಇದೆ ಎಂದು ತಂದೆ ಕೊರಗುತ್ತಾನೆ. ಬಡವನ ಮನೆಗೆ ದಲ್ಲಾಳಿ ಕರೆತರುವ ಗಂಡುಗಳು, ಅವಳ ರೂಪ ಲಾವಣ್ಯಕ್ಕೆ, ಅವಳ ಒಳ್ಳೆಯ ಗುಣಕ್ಕೆ ಮಾರು ಹೋಗದೆ ವರದಕ್ಷಿಣೆಗಾಗಿ ಬಂದು ಹೋಗುವುದು ಪರಿಪಾಠವಾಗಿತ್ತು.

ಕೊನೆಗೆ ದಲ್ಲಾಳಿಯ ಮೂಲಕ ಅದೇ ಊರಿನ ರಾಜ ಎಂಬುವನೊಂದಿಗೆ ಅವಳ ಮದುವೆಯಾಗುತ್ತದೆ. ಹಳ್ಳಿಗಾಡಿನ ಹೆಣ್ಣು ಮಕ್ಕಳು ತನ್ನ ತಂದೆ ತಾಯಿಗೆ ತೋರುವ ಗೌರವ ಎಷ್ಟರಮಟ್ಟಿಗೆ ಇರುತ್ತದೆ ಎಂದರೆ ತಾನು ಮದುವೆಯಾಗುವ ಹುಡುಗ ಕುರುಡ, ಕುಂಟನಾಗಿದ್ದರೂ ಅಪ್ಪ ಅಮ್ಮನ ಮಾತಿಗೆ ಬೆಲೆಕೊಟ್ಟು ತಮ್ಮ ಕೊರಳನ್ನು ಅವನು ಕಟ್ಟುವ ತಾಳಿಗೆ ಒಡ್ಡುತ್ತಾರೆ. ಆ ಕುಡುಕ ಗಂಡ ಕೊಡುವ ಹಿಂಸೆಯಿಂದಲೇ ಕೊನೆಯುಸಿರು ಎಳೆಯುವುದನ್ನು ಕಾಣಬಹುದು.

ತನ್ನ ಮಗಳಿಗೆ ಯೋಗ್ಯನಾದ ಗಂಡನ್ನು ಹುಡುಕಿ ಆತನಿಗೆ ಕೇಳಿದಷ್ಟು ವರದಕ್ಷಿಣೆ ಕೊಡಲಾಗದೆ ಹಗಲು ಕಂಡ ಬಾವಿಯಲ್ಲಿ ಇರುಳು ಬೀಳುವ ಎಷ್ಟು ಹೆಣ್ಣುಗಳು ಅನೇಕ ತೊಂದರೆಗೆ ಗುರಿಯಾಗಿ ಜೀವನಪರ್ಯಂತ ಕಷ್ಟವನ್ನು ಅನುಭವಿಸುತ್ತಾ ಸಾಯುತ್ತಾರೆ. ಅವರಿಗೆ ನೆಮ್ಮದಿಯ ಬದುಕು ಎಂಬುದೇ ಇರುವುದಿಲ್ಲ. ಆ ನೆಮ್ಮದಿ ಸಿಗುವುದು ಸತ್ತಾಗ ಎಂದು ಭಾವಿಸಿ ಸಾವಿಗೆ ಶರಣಾಗುತ್ತಾರೆ. ಅದಕ್ಕೆ 'ಒಡಲ ತವಕ' ಸಾಕ್ಷಿಯಾಗಿದೆ.

ಹಳ್ಳಿಯ ರೈತರಿಗೆ ನೂರಾರು ಎಕರೆ ಜಮೀನು ಇರುವುದಿಲ್ಲ. ಅವರಿಗೆ ಇರುವ ಒಂದು ಎಕರೆಯಲ್ಲಿ ವ್ಯವಸಾಯ ಮಾಡಿಕೊಂಡು ಜೀವನ ಸಾಗಿಸುತ್ತಾರೆ. ಅದರ ಜೊತೆಗೆ ಕುಡಿತಕ್ಕೆ ಒಳಗಾಗಿ ಅದನ್ನು ಮಾರಿಕೊಂಡು ತನ್ನ ಹೆಂಡತಿ ಮಕ್ಕಳು ಬೀದಿಗೆ ಬೀಳುವ ಕುಟುಂಬಗಳು ಕಂಡುಬರುತ್ತದೆ.

'ಗೌರಿ'. ಈ ಕತೆಯಲ್ಲಿ ಬೋಂಡದ ಗುಂಡಮ್ಮ ತನ್ನ ಪುಟ್ಟಿಯಲ್ಲಿ ಎಲೆ, ಅಡಿಕೆ, ಲವಂಗ, ಎಲಕ್ಕಿ, ಕಡ್ಡಿಪುಡಿ, ಬೆಂಕಿಪೊಟ್ಟಣ, ಬೀಡಿ ಸಿಗರೇಟ್ಟು, ಹೊಗೆಸೊಪ್ಪು, ಕಾಯಿಮಿಠಾಯಿ, ವಡೆ, ಬೋಂಡಾ, ಸಕ್ಕರೆ ಮಿಠಾಯಿ, ಚಕ್ಕುಲಿ ಹೀಗೆ ಬಗೆಬಗೆಯ

ತಿಂಡಿ ತಿನಿಸುಗಳನ್ನು ಮಾರಾಟ ಮಾಡಿ ಹೋಗುವುದು ರೂಢಿಯಲ್ಲಿತ್ತು. ಇಲ್ಲಿ ಅತ್ತೆ ಕಾಣದಂತೆ ಸೊಸೆ, ಅಪ್ಪ ಅವ್ವನಿಗೆ ಕಾಣದಂತೆ ಮಕ್ಕಳು, ಕಂಡಂಗೆ ಕಾಣದಂಗೆಲ್ಲಾ ಆಕೆಯ ಹತ್ತಿರ ವ್ಯಾಪಾರ ವ್ಯವಹಾರ ನಡೆಸುತ್ತಿದ್ದರು.

ಇದನ್ನು ಗಮನಿಸಿದಾಗ 'ಪರಸಿಂಗದ ಗೆಂಡೆತಿಮ್ಮ' ಕತೆಯ ನೆನಪಾಗುತ್ತದೆ. ಆತನು ಪೇಟೆಯ ವಸ್ತುಗಳನ್ನು ಹಳ್ಳಿಗೆ ತಂದು ಅದನ್ನು ಇಲ್ಲಿನ ಹೆಣ್ಣು ಮಕ್ಕಳಿಗೆ ಪರಿಚಯಿಸಿ ಮಾರಾಟ ಮಾಡುವುದನ್ನು ಕಾಣುತ್ತೇವೆ. ಅದೇ ರೀತಿಯ ಕೆಲಸವನ್ನು ಈ ಕತೆಯಲ್ಲಿ ಬೋಂಡದಗುಂಡಮ್ಮ ಮಾಡುತ್ತಾಳೆ. ಇಲ್ಲಿ ಇದೇ ಈಕೆಯ ಕುಲಕಸುಬಾಗಿ ಹೋಗಿದೆ. ಈಕೆ ಬೆಳಿಗ್ಗೆ ಬಂದರೆ ವ್ಯಾಪಾರ ಚೆನ್ನಾಗಿ ಕುದುರುತ್ತದೆ ಎಂಬ ನಂಬಿಕೆಯಿಂದಲೇ ಬೆಳಿಗ್ಗೆ ಬರುತ್ತಿದ್ದಳು. ಅವರ ಊರಿನಲ್ಲಿ ಪೆಟ್ಟಿಗೆ ಅಂಗಡಿಯನ್ನು ಇಟ್ಟುಕೊಂಡು ಗಂಡ ಓಡಿಹೋದ ಮಗಳು ಮತ್ತು ಅವಳ ಮಕ್ಕಳನ್ನು ಸಾಕುತ್ತಾ ಜೀವನ ಸಾಗಿಸುವುದನ್ನು ಕಾಣಬಹುದಾಗಿದೆ.

ಹಳ್ಳಿಯಲ್ಲಿ ಕಂಡುಬರುವ ಉದ್ಯೋಗ ಅಥವಾ ಕುಲ ಕಸುಬುಗಳಲ್ಲಿ ಕ್ಷೌರಿಕ ಒಂದು. ಇದನ್ನೇ ವೃತ್ತಿಯಾಗಿ ಬೆಳೆಸಿಕೊಂಡು ಬದುಕು ನಡೆಸುವ ಜನರು ಹಳ್ಳಿಗಳಲ್ಲಿ ಕಂಡುಬರುತ್ತಾರೆ. ಹಳ್ಳಿಗರದು ಬಿಡುವಿಲ್ಲದ ಜೀವನವಾದ್ದರಿಂದ ಕ್ಷೌರಿಕನೆ ಪ್ರತಿ ಸೋಮವಾರ ಹಳ್ಳಿಹಳ್ಳಿಗೆ ಹೋಗಿ, ಅವರ ಮನೆಯ ಬಾಗಿಲಿಗೆ ಹೋಗಿ ಕ್ಷೌರ ಮಾಡಿ ಬರುತ್ತಾನೆ. ವರ್ಷಕ್ಕೆ ಇಷ್ಟು ಎಂಬಂತೆ ರೈತ ಬೆಳೆದ ಕಾಳು ಕಡ್ಡಿಯನ್ನು ಆತನಿಗೆ ಕೊಡುತ್ತಿದ್ದರು. ಈ ಬಗೆಯಾಗಿ ತಮ್ಮ ಕುಲ ಕಸುಬುಗಳನ್ನೇ ನಂಬಿಕೊಂಡು ಹಳ್ಳಿಗಾಡಿನ ಜನರ ಬದುಕು 'ಆರಕ್ಕೆ ಏರದೆ ಮೂರಕ್ಕೆ ಇಳಿಯದೆ" ರೀತಿಯಲ್ಲಿ ಜೀವನ ಸಾಗಿಸುವ ಅನೇಕ ಮಂದಿಯನ್ನು ನಾವು ಕಾಣಬಹುದಾಗಿದೆ. ಇಂತಹ ಕುಲಕಸುಬುಗಳು ಜೀವಂತವಾಗಿರಲು ಹಳ್ಳಿಗಳೇ ಕಾರಣ.

ಮಮತೆಯ ಮಡಿಲು ಹಳ್ಳಿ ಒಂದನೊಂದು ಆಶ್ರಯಿಸಿ ಜೀವನ ಸಾಗಿಸುವವರು ಹಳ್ಳಿಯಲ್ಲಿದ್ದಾರೆ. ಇಲ್ಲಿನ ಮಣ್ಣಿನ ಮಹತ್ವವೆನಿಸುವಂತೆ ತಂದೆ ತಾಯಿಯ ಮೇಲೆ ಅಪಾರ ಪ್ರೀತಿ ಗೌರವವನ್ನು ತೋರುವುದು ಕಂಡುಬರುತ್ತದೆ. ಬಡತನದಿಂದ ಓದಿ ತಾಲ್ಲೂಕಿಗೆ ಪಸ್ಟ್ ಬರುವ ಭಾಗ್ಯಳನ್ನು ಶಾಲೆಯನ್ನು ಬಿಡಿಸಿ ಮನೆಯಲ್ಲಿ ಇರುವಂತೆ ಹೇಳಿದಾಗ ಹಿಂದೆ ಮುಂದೆ ಯೋಚಿಸದೆ ಶಾಲೆಯನ್ನು ಬಿಟ್ಟು ಮನೆಯಲ್ಲಿ ಉಳಿಯುತ್ತಾಳೆ. ಅವಳು ಬೆಳೆದು ದೊಡ್ಡವಳಾದ ನಂತರ ಸಹಜವಾಗಿ ಮದುವೆ ಮಾಡಬೇಕು ಎಂಬ ಯೋಚನೆಯಿಂದಾಗಿ ಬಹಳ ಕುಂದುತ್ತಾರೆ. ಈ ಮಧ್ಯೆ ರೈತನ ಕಷ್ಟಗಳನ್ನು ಸದುಪಯೋಗಪಡಿಸಿಕೊಂಡು ಮನೆಯನ್ನು ತನ್ನ ವಶಪಡಿಸಿಕೊಳ್ಳುವ ಹುನ್ನಾರ ನಡೆಸುವ ಅನೇಕರು ಹಳ್ಳಿಗಳಲ್ಲಿ ಕಂಡುಬರುತ್ತಾರೆ.

ಹಳ್ಳಿಗಳಲ್ಲಿ ಹೆಣ್ಣುಮಕ್ಕಳು ಓದಿದರೂ ಕೂಡ ಅವಳಿಗೆ ಯೋಗ್ಯವಾದ ಹುಡುಗರು ಬರುವುದು ಕಷ್ಟವಾಗಿತ್ತು. ಅಲ್ಲಿಯ ಜನರ ಆಲೋಚನೆ ಓದಿದವರು ಸೌಂದರ್ಯವತಿಯಾಗಿರುವವರು ಬೇಕಾಗಿರುವುದಿಲ್ಲ. ಅವರ ಮನೆಯಲ್ಲಿ ದುಡಿಯಲು ದಷ್ಟಪುಷ್ಟವಾಗಿದ್ದರೆ ಸಾಕಾಗುತ್ತಿತ್ತು. ಇದರಿಂದ ಸೌಂದರ್ಯವತಿಯಾದ ಹೆಣ್ಣು ಮಕ್ಕಳಿಗೆ ಯೋಗ್ಯವಾದ ವರ ಸಿಗುವುದಿಲ್ಲ ಇದಕ್ಕೆ ಮತ್ತೊಂದು ಕಾರಣ ಎಂದರೆ ಬಡತನ. ತಮ್ಮ ಮಕ್ಕಳಿಗೆ ಸರ್ಕಾರಿ ಕೆಲಸದಲ್ಲಿರುವ ಹುಡುಗನಿಗೆ ಕೊಟ್ಟು ಮದುವೆ ಮಾಡುವ ಸ್ಥಿತಿಗತಿಯಿಲ್ಲದೆ ಕುಡುಕನೊಬ್ಬನಿಗೆ ಮದುವೆ ಮಾಡುವ ಪ್ರಸಂಗಗಳು ಬೇಕಾದಷ್ಟು ನಡೆದಿವೆ. ಅಂತಹ ಮುಗ್ಧ ಹೆಣ್ಣು ಮಕ್ಕಳು ಪಾಪದ ಕೂಪಕ್ಕೆ ನೂಕಿ ಅದರೊಂದಿಗೆ ಸಹಬಾಳ್ವೆ ನಡೆಸಲು ಸಾಧ್ಯವಾಗದೆ ಒರಟು ಗಂಡನಿಂದ ನೊಂದು ತನ್ನ ಕೊನೆಯ ಉಸಿರು ಎಳೆಯುವಂತ ಪ್ರಸಂಗವನ್ನು ನಾವು ಕಾಣುತ್ತೇವೆ.

**'ಆಸಕ್ತಿ'** ಈ ಕತೆಯಲ್ಲಿ ತಂದೆಯ ಮಾತಿಗೆ ತಪ್ಪದೆ ಅವರ ಮಾತನ್ನು ನಡೆಸಿಕೊಂಡು ಹೋಗುವುದಕ್ಕಾಗಿ ಮಗ ಮಾಡಿದ ಸಾಹಸ ಕತೆಯನ್ನು ಒಳಗೊಂಡಿದೆ. ಅಪ್ಪ ತನ್ನ ಮಗನಿಗೆ ತನ್ನ ಮನೆತನದ ಗೌರವ ಉಳಿಸುವುದರ ಬಗ್ಗೆ; ತನ್ನ ಹೆಸರು ಉಳಿಸುವುದರ ಬಗ್ಗೆ ಹೇಳುತ್ತಾ "ನಿನ್ನ ದೊಡ್ಡವ್ವ ಮತ್ತು ಅವಳ ಮಗನನ್ನು ತಿರಸ್ಕಾರದಿಂದ ಕಾಣಬೇಡ. ನಿನ್ನ ಹೆತ್ತವ್ವನಂತೆಯೇ ಅವಳನ್ನೂ ಕಾಣು ಆಕೆ ನನಗೆ ಎಷ್ಟೇ ದ್ವೇಷಿಯಾಗಿದ್ದರು ಅವಳು ನಾಲ್ಕು ದಿನ ನನ್ನ ಜೊತೆಯಲ್ಲಿ ಇದ್ದವಳು. ಸಂಸಾರ ನಡೆಸಿದವಳು. ಆಕೆಯ ಮಗನೂ ನಿನ್ನ ಹಾಗೆಯೇ ತುಂಬಾ ಒಳ್ಳೆಯವನು. ಅವನ ಬಗ್ಗೆ ನಿನಗೆ ನಾನು ಹೇಳಬೇಕಾಗಿಲ್ಲ. ಆದರೆ ಆತ ತನ್ನವ್ವನ ಹಿಡಿತದಲ್ಲಿದ್ದಾನೆ. ಹಾಗೆ ಆತ ಅವಳ ಹಿಡಿತದಲ್ಲಿದ್ದರೂ ಅವನ ಆಸೆಗಳೆಲ್ಲಾ ನನ್ನ ಮೇಲೆ, ನಿಮ್ಮ ಮೇಲೆಯೇ, ಅವನಿಗೂ ಅದು ನಿಜ,ಎಷ್ಟೇ ಆಗಲಿ, ಅವನಿಗೆ ಈಗ ಅವರವ್ವನ ಬಿಟ್ಟರೆ ಬೇರೆ ದಾರಿನೇ ಇಲ್ಲವಲ್ಲ? ಈ ವಿಷಯವನ್ನು ಮಾತ್ರ ನೀನು ಗುಟ್ಟಾಗಿ ನಿನ್ನ ಮನಸ್ಸಿನಲ್ಲಿಯೇ ಇಟ್ಟುಕೋ! ಯಾಕೆಂದರೆ ಎಲ್ಲಿ ನಿನ್ನ ಅವ್ವನಿಗೆ ಗೊತ್ತಾಗಿ ಬಿಟ್ಟಾದೊ ಎಂದು ಭಯ ನನಗೆ. ಗೊತ್ತಾದರೆ ಆಕೆ ಈಗ ಹುಲಿಯಾಗಿ ಬಿಡುತ್ತಾಳೆ. ನನ್ನ ನಿನ್ನ, ನಿನ್ನ ದೊಡ್ಡವ್ವನ, ಅವಳ ಮಗನ ಎಲ್ಲರನ್ನೂ ನುಂಗಿ ಬಿಡುತ್ತಾಳೆ. ಅವಳಿಗೂ ಅಷ್ಟೊಂದು ಸಿಟ್ಟು ನೋವು ಇದೆ.' ಎಂಬುದಾಗಿ ಮಗನಿಗೆ ಹೇಳಿದ ಮಾತುಗಳನ್ನು ಚಾಚು ತಪ್ಪದೆ ಪಾಲಿಸಲು ಪ್ರಯತ್ನ ಮಾಡುವುದು.

ಹಳ್ಳಿಗಳನ್ನು ಹೆಚ್ಚಾಗಿ ಕಂಡುಬರುವುದು 'ಕೂಡಿಕೆ ಪದ್ಧತಿ' ಇದರಲ್ಲಿ ಮೊದಲ ಹೆಂಡತಿ ಜಗಳ ಆಡಿಕೊಂಡು ತನ್ನ ತವರು ಮನೆಗೆ ಹೋದ ಮೇಲೆ ಮತ್ತೊಬ್ಬಳನ್ನು ಮದುವೆಯಾಗುವುದು ಸಹಜವಾಗಿತ್ತು. ಈ ಕೂಡಿಕೆ ಪದ್ಧತಿಯಲ್ಲಿ ಒಂದು ಮಗುವಿನ ತಾಯಿಯಾಗಿರುವ ವಿಧವೆಯನ್ನೇ ಮದುವೆ ಮಾಡಿಕೊಂಡ ಉದಾರಿ ವ್ಯಕ್ತಿಗಳು ಈ

ಹಳ್ಳಿಯಲ್ಲಿ ಇರುವುದು ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿ ತಂದೆ ಸತ್ತ ಮೇಲೆ ಅವನ ತಿಥಿ ಕಾರ್ಯಗಳನ್ನು ಮಾಡುವುದನ್ನು ನಾವು ಕಾಣುತ್ತೇವೆ. ಇದನ್ನು ಮಾಡಬೇಕಾದರೂ ಕೂಡ ಸವತಿಯರ ನಡುವೆ ಕಿತ್ತಾಟ ಕಂಡು ಬರುತ್ತವೆ. ಹೀಗೆ ತಮ್ಮ ಮನೆಯ ಮರ್ಯಾದೆಯನ್ನು ಬೀದಿಗೆ ತಂದು ತಮ್ಮ ಕುಟುಂಬದ ಗೌರವವನ್ನು ಹಾಳು ಮಾಡುವವರು ಹೆಚ್ಚಾಗಿ ಕಂಡು ಬರುತ್ತವೆ. ಅದಕ್ಕೆ ವಿರುದ್ಧ ಎನ್ನುವಂತೆ ತಮ್ಮ ಕುಟುಂಬ ಗೌರವವನ್ನು ತನ್ನ ತಂದೆಯ ಮಾತನ್ನು ನೆರವೇರಿಸಲು ಪ್ರಯತ್ನಪಡುವ ಮಕ್ಕಳನ್ನು ನಾವು ಕಾಣಬಹುದಾಗಿದೆ.

ಒಂದು ಕುಟುಂಬದಲ್ಲಿ ಆಗುವ ಒಡಕುಗಳನ್ನು ಅರ್ಥಮಾಡಿಕೊಂಡು ಅದನ್ನು ದುರುಪಯೋಗ ಪಡಿಸಿಕೊಳ್ಳುವವರು ಅನೇಕ ಮಂದಿ ಇರುತ್ತಾರೆ. ಆದರೆ ಪ್ರಜ್ಞಾವಂತ ಮಕ್ಕಳು ತಮ್ಮ ಕುಟುಂಬದಲ್ಲಿ ಅನ್ಯರನ್ನು ಸೇರ್ಪಡಿಸಲು ಇಚ್ಛಿಸದೆ ತನ್ನ ತಂದೆಯ ಆಸ್ತಿಯನ್ನು ತಾನೇ ಭಾಗಮಾಡಲು ತೀರ್ಮಾನಿಸುತ್ತಾನೆ. ಅದರಂತೆ ತನ್ನ ದೊಡ್ಡವ್ವನಿಗೆ ಸ್ವಲ್ಪ ಆಸ್ತಿ ಕೊಟ್ಟು ತನ್ನ ತಾಯಿಗೆ ಆಸ್ತಿ ಭಾಗ ಮಾಡಿ ಯಾರು ಕೋರ್ಟ್‌ಗೆ ಹೋಗದಂತೆ ತಪ್ಪಿಸುತ್ತಾನೆ. ತನ್ನ ತಂದೆ ತಿಥಿ ಕಾರ್ಯದಲ್ಲಿ ಹಿರಿಯ ಮಗ ಮಾಡಬೇಕಾದ ಎಲ್ಲಾ ಕಾರ್ಯವನ್ನು ತನ್ನ ದೊಡ್ಡವ್ವನ ಮಗನಿಂದಲೇ ಮಾಡಿಸಿ ತಂದೆ ಮಾತನ್ನು ನಡೆಸಿದಂತಹ ಮಕ್ಕಳು ಇದ್ದಾರೆ ಎಂದರೆ ಅದು ಹಳ್ಳಿಗಳಲ್ಲಿ.

ಈ ಕತೆಗಳ ಮೂಲಕ ನಮಗೆ ತಿಳಿದುಬರುವಂತಹದು ಎಂದರೆ ಹಳ್ಳಿಯ ಮಂದಿ ಮುಗ್ಧರೆಂದು ಅನೇಕ ಮಂದಿ ದುರಪಯೋಗಪಡಿಸಿಕೊಳ್ಳುವವರು ನಮ್ಮ ಹಳ್ಳಿಗಳಲ್ಲಿ ಅನೇಕ ದ್ರೋಹಿಗಳು ಇರುತ್ತಾರೆ. ಆದರೆ ನಾವುಗಳು ಅವರ ಗಾಳಕ್ಕೆ ಸಿಗಬಾರದು. ನಮ್ಮ ಸಂಸಾರದ ಸಮಸ್ಯೆಯನ್ನು ನಾವೇ ಕುಳಿತು ಬಗೆಹರಿಸಿ-ಕೊಳ್ಳಬೇಕು. "ಸಂಸಾರ ಗುಟ್ಟು ವ್ಯಾದಿರಟ್ಟು" ಎಂಬಂತೆ ನಮ್ಮ ಕುಟುಂಬ ಸಮಸ್ಯೆಗಳನ್ನು ಬೀದಿಗೆ ತರದೆ ಎಚ್ಚರ ವಹಿಸಿ ನಮ್ಮ ಸಂಸಾರ ಕಾಪಾಡಿಕೊಳ್ಳಬೇಕು. ಆದಷ್ಟು ಮಧ್ಯವರ್ತಿಗಳು ಪ್ರವೇಶಿಸಲು ಬಿಡದಂತೆ ನೋಡಿಕೊಳ್ಳಬೇಕು. ನಾವುಗಳು ಪ್ರಬಲವಾಗಿದ್ದರೆ ಬೇರೆಯವರು ತಮ್ಮ ಕುಟುಂಬದಲ್ಲಿ ಪ್ರವೇಶಿಸಲು ಹೆದರುತ್ತಾರೆ. ನಾವು ದುರ್ಬಲವಾಗಿದ್ದ ಸಂದರ್ಭದಲ್ಲಿ ಅನ್ಯರು ಪ್ರವೇಶಿಸುತ್ತಾರೆ.

**'ಉಗುಳು'** ಈ ಕತೆಯಲ್ಲಿ ಹಳ್ಳಿಗಳಲ್ಲಿ ಕಂಡುಬರುವ ಜೀತದಾಳು ವ್ಯವಸ್ಥೆ ಕಂಡುಬರುತ್ತದೆ. ಗೌಡರು ಮನೆಯ ಅಂಗಳದಲ್ಲೆಲ್ಲಾ ಸುತ್ತಾಡಿ ಪಡಸಾಲೆ ಮೇಲಕ್ಕೆ ಬಂದು ಕೂತ. ದಿನಕ್ಕೆ ಎರಡು ಸಾರಿ ಹೊತ್ತಾರೆ, ಸಂಜೆ ಮನೆಯ ಮುಂದಿನ ದೊಡ್ಡ ಅಂಗಳ ಮತ್ತು ಒಂಭತ್ತು ಕಂಬದ ಪಡಸಾಲೆಯನ್ನು ಅಚ್ಚುಕಟ್ಟಾಗಿ ಗುಡಿಸಿ ಒರೆಸಬೇಕಾಗಿತ್ತು. ಮನೆಯಲ್ಲಿರುವ ಹೊಲೇರಟ್ಟಿಯ ಕೊಂಡನಮಗಳು ಗುಡಿಸಿ ಒರೆಸಬೇಕಾಗಿತ್ತು. ಮನೆಯಲ್ಲಿರುವ ಹೊಲೇರಟ್ಟಿಯ ಕೊಂಡನ ಮಗಳು ಚಿಕ್ಕಿಯದು

ಪ್ರತಿದಿನ ಅದೇ ಕೆಲಸ. ಗೌಡರ ದನಿಗಟ್ಟಿ, ಕುರಿಯಟ್ಟಿ ಬೇರೆ ಕಡೆಯೇ ಇರುವುದರಿಂದ ಈ ಮನೆಯ ಹತ್ತಿರ ಮಾತ್ರ ಯಾವ ದನ ಕುರಿ ಕೋಳಿ ಅಂತ ಸುಳಿಯುವಂತಿಲ್ಲ. ಪಡಸಾಲೆಯ ಮೇಲೆ ಕೂತ ಗೌಡರು ಒಮ್ಮೆ ಅಂಗಳವನ್ನೂ ಒಮ್ಮೆ ಪಡಸಾಲೆಯನ್ನೂ ದಿಟ್ಟಿಸುತ್ತಿದ್ದರು.

ಅಂಗಳದಲ್ಲಿ ಯಾರೋ ಈಗ ತಾನೇ ನಡೆದು ಹೋಗಿರುವ ಧೂಳಿನ ಮಾಸಲು ಹೆಜ್ಜೆಗಳು ಕಾಣಿಸುತ್ತಿದ್ದವು. ಪಡಸಾಲೆಯಲ್ಲಿ ಉಗಿದು ಹೋಗಿರುವ ತೊಂಟೆಗೆ ನೊಣಗಳು ಜುಯ್ ಎಂದು ಮುತ್ತಿದ್ದವು. ಗೌಡರಿಗೆ ಅದನ್ನು ಕಂಡು ಹೊಟ್ಟೆಯೊಳಗಿನಿಂದ ಸಿಟ್ಟು ಉಮ್ಮಳಿಸಿಕೊಂಡು ಬಂದು "ಚಿಕ್ಕಿ" ಎಂದು ಕೂಗಿದರು.

ಸರ್ಕಾರ ಜೀತಪದ್ಧತಿಯನ್ನು ಹೋಗಲಾಡಿಸಲು ಅನೇಕ ಕಾಯ್ದೆಗಳನ್ನು ತಂದಿದ್ದರು ಕೂಡ ಹಳ್ಳಿಗಳಲ್ಲಿ ಈ ಪದ್ಧತಿ ಮಾತ್ರ ಇನ್ನೂ ಇರುವುದನ್ನು ಕಾಣಬಹುದಾಗಿದೆ. ಬಡಕುಟುಂಬವಾದರೂ ಹೆಚ್ಚು ಮಕ್ಕಳನ್ನು ಪಡೆದಿರುವುದರಿಂದ ಅವರನ್ನು ಸಾಕಲು ಮದುವೆ ಮುಂಜಿ ಮಾಡಲು, ಕೂಲಿ ನಾಲಿ ಮಾಡಿದರು ಸಾಕಾಗದು. ಆಗ ಹಳ್ಳಿಯ ಗೌಡನ ಬಳಿ ಹೋಗಿ ಸಾಲ ಪಡೆದು ಅ ಸಾಲವನ್ನು ತೀರಿಸಲು ಅಸಾಧ್ಯವಾದಾಗ ತನ್ನ ಮಕ್ಕಳನ್ನು ಜೀತದಾಳಾಗಿ ಸೇರಿಸುವುದು ಕಂಡುಬರುತ್ತದೆ. ಈ ಗೌಡರು ತನ್ನ ಜೀತದಾಳುಗಳನ್ನು ಕಂಡುಕೊಳ್ಳುತ್ತಿದ್ದ ರೀತಿ ಮೃಗಗಳಿಗಿಂತ ಕೀಳಾಗಿತ್ತು. ಬೆಳಿಗ್ಗೆಯಿಂದ ಸಂಜೆಯವರೆಗೂ ಬಾಡಿಗೆ ಎತ್ತು ದುಡಿಯುವ ಹಾಗೆ ದುಡಿದರು ತೃಪ್ತಿಯಿಲ್ಲ. ಒಂದಲ್ಲಾ ಒಂದು ಕಾರಣ ಹುಡುಕಿ ಆಕೆಯನ್ನು ಬೈಯ್ಯುವುದೇ ಅವನ ಕೆಲಸ.

"ಗುಡಿಸಿದ್ದೀಯಾ? ಅಲ್ಲಿ ನೋಡು ಆ ಧೂಲಿನ ಹೆಜ್ಜೆಗಳ? ತೊಳೆದಿದ್ದೀಯಾ ಇಲ್ಲಿ ನೋಡು ಆ ತೊಂಟೆ ಯಾರದು? ಇದೇನು ಮನೆಯೋ? ಹೊಲಗೇರಿಯೋ? ಎಂದು ಕೋಪದಿಂದ ಗೌಡರು ತಮ್ಮ ಹಲ್ಲುಗಳನ್ನು ತಾವೇ ನರನರನೇ ಕಡಿದರು.

ಗೌಡರ ಮನೆಯಲ್ಲಿ ಕೆಲಸ ಮಾಡುವವರಲ್ಲಿ ಸಾಮಾನ್ಯವಾಗಿ ಚಿಕ್ಕ ಮಕ್ಕಳು ಕೂಡ ಇರುತ್ತಿದ್ದರು. ಅವರ ಆರ್ಭಟಕ್ಕೆ ಹೆದರಿ ಲಂಗ ಅಥವಾ ಚಡ್ಡಿಯಲ್ಲಿ ಉಚ್ಚೆ ಮಾಡಿಕೊಳ್ಳುವುದನ್ನು ನಾವು ಕಾಣಬಹುದಾಗಿತ್ತು. ಅವರಿಗೆ ಎದುರು ಮಾತನಾಡುವ ಸಾಮರ್ಥ್ಯ ಇರುವುದಿಲ್ಲ. ನಮ್ಮ ಹಳ್ಳಿಗಳಲ್ಲಿ ಆ ಮುಗ್ಧ ಕಂದಮ್ಮಗಳಿಂದ ದುಡಿಸಿಕೊಳ್ಳುವುದು ಎಷ್ಟು ಮಹಾ ಅಪರಾಧ ಎಂಬುದನ್ನು ಮನಗೊಳ್ಳುವಂತೆ ಮಾಡಬೇಕು. ಆ ಅನಿಷ್ಟ ಪದ್ಧತಿಯನ್ನು ತೊಡೆದುಹಾಕಬೇಕು.

"ಅವನ ಹೆಂಡತಿಗೆ ಉಬ್ಬಸ ಅಂತೆ. ಆಸ್ಪತ್ರೆಗೆ ಕರ್‍ಕೊಂಡ್ ಹೋಗಬೇಕಂತೆ ಮತ್ತೆ ಚಿಕ್ಕಿ ನೋಡೋದಿಕ್ಕೆ ಯಾವುದೋ ಒಂದು ಗಂಡು ಬೇರೆ ಬರ್ತೀನಿ

ಅಂದವನಂತೆ. ಅದ್ಕೆ ಏಳೆಂಟು ದಿನದ ಮಟ್ಟಿಗೆ ನನ್ನ ಮಗಳ ಕಳಿಸಿಕೊಡಿ ಅಂತ ಬಂದಿದ್ದ."

ಆ ಹುಡುಗಿಯ ತಂದೆ ಬಂದ ವಿಚಾರವನ್ನು ತಿಳಿಸಿದಾದ ಆತನು ಆ ಹುಡುಗಿಯನ್ನು ತನ್ನ ಮನೆಯಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಹೊಲಗೇರಿಯ ಜನ ಗೌಡರು ಎಂದರೆ ಸಾಕ್ಷಾತ್ ದೇವರು ಎಂದು ಆತನಿಗೆ ಗೌರವ ತೋರಿಸುತ್ತಾರೆ. ತನ್ನ ಮಗಳಿಗೆ ಮದುವೆ ಮಾಡಲು ಹುಡುಗ ನೋಡಲು ತೋರಿಸುವಂತೆ ಕೇಳಿದಾಗ ಅದನ್ನು ನಿರಾಕರಿಸುವುದರ ಜೊತೆಗೆ ಗಂಡನ ಬಿಟ್ಟು ಬಂದಿರುವ ಹುಡುಗಿಯರೆ ಅವ ಅವ್ವನನ್ನು ನೋಡಿಕೊಳ್ಳುತ್ತಾರೆ ಎಂದನು. ಗೌಡರ ಮನದಲ್ಲಿ ಅವರ ಬಗ್ಗೆ ಕನಿಕರ ತೋರಿದರೆ ಅವರು ನಮ್ಮನ್ನು ತುಳಿಯುತ್ತಾರೆ ಎಂಬ ಭಾವನೆ ಗಟ್ಟಿಯಾಗಿತ್ತು. ಹಬ್ಬದ ದಿನ ಹತ್ತಿರ ಬಂದಿರುವುದರಿಂದ ದುಡಿಸಿಕೊಳ್ಳುವಂತೆ ತನ್ನ ಹೆಂಡತಿಗೆ ಹೇಳುವುದು ಕಾಣಬಹುದು. ಅ ಪುಟ್ಟ ಬಾಲಕಿಯ ಕೈಯಲ್ಲಿ ಸಾಧ್ಯವಾಗದ ಕೆಲಸವನ್ನು ಮಾಡಿಸಿಕೊಳ್ಳುವುದನ್ನು ಕಾಣಬಹುದು.

'ಊರುಹಬ್ಬ' ಎಂದರೆ ಹಳ್ಳಿಯ ಮನೆಗಳೆಲ್ಲಾ ರಂಗು ರಂಗಿನಿಂದ ಕಂಗೊಳಿಸುತ್ತವೆ. ಎಂತಹ ಬಡವರಾದರೂ ಕೂಡ ಹರ್ಷದಿಂದ ಈ ಹಬ್ಬ ಆಚರಿಸುವುದನ್ನು ಕಾಣಬಹುದು. ಆ ದಿನ ಬಡವ ಬಲ್ಲಿದ ಎಂಬ ಬೇಧಭಾವ-ವಿರುವುದಿಲ್ಲ. ಸಾಲಸೂಲ ಮಾಡಿಯಾದರೂ ಈ ಹಬ್ಬ ಆಚರಣೆ ಮಾಡಲೇ ಬೇಕು. ಹಳ್ಳಿಗಳ ವಿಶೇಷವೆಂದರೆ ಹರಕೆಗಳನ್ನು ಕೊಟ್ಟು ಪೂಜೆ ಮಾಡುವುದು. ಅ ಹಬ್ಬವನ್ನು ಆಚರಿಸದೇ ಇದ್ದರೆ ನಮ್ಮ ಏಳಿಗೆ ಸಾಧ್ಯವಾಗುವುದಿಲ್ಲ ಎಂಬ ನಂಬಿಕೆ ಹಳ್ಳಿಗಳಲ್ಲಿ. ಹಬ್ಬಕ್ಕೆ ಬೇಕಾದ ಸಿದ್ಧತೆಗಾಗಿ ಗೌಡರ ಕುಟುಂಬವರ್ಗದವರು ಶ್ರಮಪಡಬೇಕಾಗಿಲ್ಲ. ಅದನ್ನು ಆಳುಗಳೆ ಮಾಡುತ್ತಿದ್ದರು.

ಹೊಲೇರ, ಹೊಲೇರ ಮಾದ ನನ್ನ, ನನ್ನ ಮೊಖಕ್ಕೆ ಉಗಿದು ಬಿಟ್ಟ ಹ.ಹ.ಹ.ಹೂ.ಹೂ.ಹೂ' ಮಾತನ್ನು ಅಳುವಿನ ನಡುವೆಯೇ ಹೇಳಿ ಮತ್ತೆ ತನ್ನ ಅಳುವನ್ನು ಜಾಸ್ತಿ ಮಾಡಿದ. ತಾತನಿಗೆ ತಡೆಯಲಾಗಲಿಲ್ಲ. "ಯಾರ್ಲ ಅವನು ಹೊಲೇರ ಮಾದ?" ಎಂದು ಮಗನ ಕೇಳುತ್ತಾ ಉರಿದು ಬಿದ್ದರು. ಮಗ "ಮಾದ ಮಾದ?" ಎಂದು ತಬ್ಬಿಬ್ಬಾದ ಚಿಕ್ಕಿ ನಡುವೆ "ಮಾದ ಅಂದ್ರೆ ನಮ್ಮ ಕೇರಿಯ ಉಲ್ಲುರನ ಮಗ. ಮಾದೇಶ್ವರನ ಒಕ್ಕಲು ಅವರು. ಅದಕ್ಕೆ ಅವರ ಮಗನಿಗೆ ಮಾದೇವ್ ಎಮದು ಹೆಸರಿಟ್ಟಿವ್ರಂತೆ" ಎಂದಳು.

ಮಾನವ ಜಾತಿ ಒಂದೇ, ಹೊಲೆಯ ಒಕ್ಕಲಿಗ ಎಂಬ ಬೇಧವನ್ನು ಕಾಣದ ಮುಗ್ಧ ಮಕ್ಕಳಲ್ಲಿ ಜಾತಿಯ ವಿಷ ಬೀಜ ಬಿತ್ತುವ ಕೆಲಸ ಇಲ್ಲಿ ನಡೆಯುವುದನ್ನು ಕಾಣಬಹುದು ಶಾಲೆಯಲ್ಲಿ ಎಲ್ಲಾ ಮಕ್ಕಳು ಒಂದೇ ಎಂಬ ಭಾವನೆ ಉಂಟು ಮಾಡುವ

ಪ್ರಯತ್ನ ನಡೆಯುತ್ತಿದ್ದರು ಹಳ್ಳಿಯ ಕೆಲವು ಮನೆಗಳಲ್ಲಿ ಮಕ್ಕಳಲ್ಲೂ ಜಾತಿಯ ಬೀಜ ಮೊಳಕೆ ಹೊಡೆದಿದೆ. 'ಹೊಲೇರ ಮಾದ ಉಗುದು ಬಿಟ್ಟ ಎಂಬುದೇ ದೊಡ್ಡ ವಿಷಯ ಎಂಬಂತೆ ಗೌಡನ ಆರ್ಭಟ ಕೇಳಿ ಬರುತ್ತದೆ. ಬಾಲಕನ ತಂದೆಯನ್ನು ಕರೆದು ಅವನಿಗೆ ಬೈಯ್ಯುವವರೆಗು ಅವರಿಗೆ ಸಮಾಧಾನವಾಗುವುದೇ ಇಲ್ಲ. ಜೊತೆಗೆ ಅವನಿಗೆ ದಂಡವನ್ನು ಹಾಕಸುವುದನ್ನು ನಾವು ಕಾಣಬಹುದು. ಏನೇಯಾದರು ಹೊಲೇರು ಮುಂದೆ ಬರಬಾರದು. ಅವರ ಮಕ್ಕಳಿಗೂ ಒಳ್ಳೆಯ ಹೆಸರನ್ನು ಇಡಬಾರದು. ಊರ ಗೌಡರ ಮುಂದೆ ನಿಂತು ಮಾತನಾಡಬಾರದು ಎಂಬ ನಿಯಮವಿತ್ತು. ಯಾರಾದರೂ ಹೊಲಗೇರಿ ಜನ ಗೌಡರ ಎದುರಿಗೆ ನಿಂತು ಗಟ್ಟಿಯಾಗಿ ಮಾತನಾಡಿದರೆ ಅವರ ಕತೆ ಅಲ್ಲಿಗೆ ಮುಗಿಯಿತು ಎಂದರ್ಥ.

ಬಡವ ತಪ್ಪು ಮಾಡಿದರೆ ಉರೆಲ್ಲಾ ಸುದ್ಧಿಯಾಗುತ್ತದೆ. ಶ್ರೀಮಂತ ಮಾಡಿದ ತಪ್ಪು ಅಲ್ಲೇ ಮುಚ್ಚಿಹೋಗುತ್ತದೆ ಎಂಬುದು 'ಉಗುಳು' ಕತೆಯಲ್ಲಿ ಸ್ಪಷ್ಟವಾಗುತ್ತದೆ. 'ಉರಿಯೋದುಕ್ಕೆ ಉಪ್ಪು ಹಾಕು' ಎಂಬಂತೆ ಗೌಡರನ್ನು ಮತ್ತಷ್ಟು ಪ್ರೇರೇಪಿಸುವ ಪ್ರಯತ್ನ ಮಾಡುತ್ತಾ ಹೊಲಗೇರಿಯವರೆಲ್ಲರೂ ಒಕ್ಕಲಿಗರ ಮೇಲೆ ಸಿಡಿದೇಳುತ್ತಾರಂತೆ ಎಂದಾಗ ಗೌಡರು 'ಅಷ್ಟು ಸುಲಭ ಅಲ್ಲ. ಹೊಲೇರು ನಮ್ಮ ವಿರುದ್ಧ ನಿಲ್ಲೋದು, ಹೋಗು ಒಳಗೆ ಕೆಲಸ ನೋಡು' ಎಂದು ಅವರನ್ನು ಗದರಿಸಿದರು. ಇವರ ಮನೆಗಳಲ್ಲಿ ಕೇವಲ ಹೊಲಗೇರಿಯವರು ಮಾತ್ರವಲ್ಲ. ಬಡ ಒಕ್ಕಲಿಗರು ಕೂಡ ಜೀತಕ್ಕಿಟ್ಟಿರುವರು.

ಹಳ್ಳಿಯ ಕೆಲವು ದೇವಾಲಯಗಳಲ್ಲಿ ಪೂಜಾರಯ್ಯನವರು ಹೊಲಗೇರಿಯವರೇ ಆಗಿರುತ್ತಾರೆ. ಈ ರೀತಿ ಇದ್ದಾಗ ಮೇಲ್‌ವರ್ಗದವರಲ್ಲಿ ಅಸಮಾಧಾನ ವಿಧಿಯಿಲ್ಲದೆ, ಅರ್ಚಕರಿಮದ ಪೂಜೆ ಮಾಡಿಸಿ. ಅವರ ಬಾಯಿಯಿಂದ ಉಗಿಸಿಕೊಂಡರೆ ದೇವರ ಕೃಪೆ ನಮಗೆ ಆಗಿದೆ ಎಂದರ್ಥ ಅವರು ಉಗಿಯದೆ ಇದ್ದರೆ ಅವರ ಆಶೀರ್ವಾದ ನಮಗೆ ದೊರಕುವುದಿಲ್ಲ ಎಂಬ ನಂಬಿಕೆ ಅಪಾರವಾಗಿತ್ತು. ಇದನ್ನು ಗಮನಿಸಿದಾಗ ಅರ್ಥವಿಲ್ಲದ ಆಚರಣೆಗಳನ್ನು ನಡೆಸಿಕೊಂಡು ಬರುತ್ತಿರುವುದು ಹಾಸ್ಯಾಸ್ಪದಕ್ಕೆ ಎಡೆಮಾಡಿಕೊಡುತ್ತದೆ. ಮಗು ಉಗಿದುದು ದೊಡ್ಡ ರಂಪ ಮಾಡಿದ ಗೌಡರು ಹೊಲಗೇರಿಯವನೆ ಆದ ಪೂಜಾರಯ್ಯನ ಬಾಯಿಂದ ಉಗಿಸಿಕೊಳ್ಳುತ್ತಿರುವುದು ಮಗುವಿಗೆ ಅಚ್ಚರಿಯನ್ನು ಉಂಟು ಮಾಡುತ್ತದೆ. ಹಳ್ಳಿಗಾಡಿನ ಸಂಪ್ರದಾಯಗಳು ನಮ್ಮ ಜನರನ್ನು ಇನ್ನೂ ಮೌಢ್ಯತೆಯೆಡೆಗೆ ಕೊಂಡ್ಯೊಯ್ಯುವುದನ್ನು ಕಾಣಬಹುದು. ಬೇರೆ ವಿಚಾರದಲ್ಲಿ ಜಾಗೃತಗೊಳ್ಳುವ ಈ ವ್ಯಕ್ತಿಗಳು ಈ ಆಚಾರಗಳ ಬಗ್ಗೆ ಅಂಧವಿಶ್ವಾಸವಿಟ್ಟುಕೊಂಡಿ ರುವುದನ್ನು ನಾವು ಕಾಣಬಹುದಾಗಿದೆ. ಎಲ್ಲಿಯವರೆಗೆ ಈ

ಆಚರಣೆಗಳು ನಡೆದುಕೊಂಡು ಬರುತ್ತವೋ ಅಲ್ಲಿರುವವರೆವಿಗೂ ಹಳ್ಳಿಗಳ ಉದ್ಧಾರ ಸಾಧ್ಯವಿಲ್ಲ.

**'ಜೊತೆಗಾತಿ'** ಕತೆಯಲ್ಲಿ ಮನೆ ಆಳುಗೆ ಹೆಚ್ಚು ಸ್ವಾತಂತ್ರ್ಯವನ್ನು ಕೊಟ್ಟಿದ್ದಾನೆ. ಅವರನ್ನು ತನ್ನ ಮಕ್ಕಳ ರೀತಿ ಕಾಣುತ್ತಾನೆ. ಇವನು ಹೊಲಗೇರಿ ಹುಡುಗನೊಬ್ಬ ಇವರ ಮನೆಯಲ್ಲಿ ಇದ್ದು ಹುಟ್ಟು ಸೋಮಾರಿ, ಬದುಕು ಅಂತ ನೋಡುವುದಿಲ್ಲ. ಆತನಿಗೆ ಪ್ರೀತಿಯೇ ಹೆಚ್ಚು. ಗೌಡ ಬಗ್ಗೆ ಅಪಾರ ಅನುಕಂಪ ತೋರುವುದನ್ನೇ ದುರುಪಯೋಗಪಡಿಸಿಕೊಂಡು ಅಡ್ಡ ದಾರಿಯನ್ನು ತುಳಿಯುತ್ತಾನೆ. ಆತನಿಗೆ ಎಷ್ಟರಮಟ್ಟಿಗೆ ಸ್ವಾತಂತ್ರ್ಯವಿತ್ತು ಎಂದರೆ ಮುಸ್ಸಂಜೆಯಾಗುವುದೇ ತಡ. ಆತ ಏನಾದರೂ ಒಂದು ನೆಪ ಹೇಳಿ ಹೊಲಗೇರಿಗೆ ಓಡಿಹೋಗುತ್ತಿದ್ದ. ಈತ ತನ್ನ ತಾಯಿಯೊಂದಿಗೆ ಸೇರಿ ಹೆಂಡವನ್ನು ಕುಡಿದು ಮಧ್ಯರಾತ್ರಿಗೆ ಯಜಮಾನ ಮನೆಗೆ ಬರುತ್ತಿದ್ದ. ಗೌಡರಿಗೆ ಯಾವುದು ಜವಾಬು ಹೇಳಿ ಸುಮ್ಮನೆ ಇರುತ್ತಿದ್ದನು. ಜೊತೆಗೆ ಹೊಲಗೇರಿಯಲ್ಲಿ ತನ್ನ ಜಾತಿಯ ಯುವಕರನ್ನೆಲ್ಲಾ ಸೇರಿಸಕೊಂಡು ಊರಿನ ಒಕ್ಕಲಿಗರ ವಿರುದ್ಧ ಬಂಡಾಯ ಏಳುವಂತೆ ಸನ್ನಾಹ ಮಾಡುತ್ತಿದ್ದರು. ಇದಕ್ಕೆ ಮೂಲ ಗೌಡರ ಮಗನೆ ಕಾರಣವಾಗಿದ್ದನು. ಹೊಲಗೇರಿಯ ಯುವಕರಲ್ಲಿ ಜಾತಿಪದ್ಧತಿಯ ವಿರುದ್ಧ ಶ್ರೀಮಂತಿಕೆಯ ವಿರುದ್ಧ ಹೋರಾಡುವಂತೆ ಕರಿಯನಿಗೆ ಪಾಠ ಧೈರ್ಯ ತುಂಬುವ ಗೌಡರ ಮಕ್ಕಳನ್ನು ಕಾಣಬಹುದು.

**'ಉಗುಳು'** ಕತೆಯಲ್ಲಿ ಬರುವ ಗೌಡನ ಆರ್ಭಟಕ್ಕೂ 'ಜೊತೆಗಾತಿ' ಕತೆಯ ಗೌಡನ ಉದಾರಗುಣ ಅಜಗಜಾಂತರವನ್ನು ನಾವು ಕಾಣಬಹುದಾಗಿದೆ. ಇಲ್ಲಿ ಗೌಡರ ಮಗನು ಅವರಲ್ಲಿ ಜಾಗೃತಿ ಮೂಡಿಸುವುದು ಕಂಡುಬರುತ್ತದೆ. 'ಜೊತೆಗಾತಿ'ಯಲ್ಲಿ ಗೌಡ ಕೊಟ್ಟಿರುವ ಸದರ ಎಷ್ಟಿತ್ತೆಂದರೆ ಗೌಡರ ಮಗಳ ಜೊತೆ ಕರಿಯನು ಹೆದರಿಕೆಯಿಲ್ಲದೆ ಧೈರ್ಯದಿಂದ ಮಾತನಾಡುತ್ತಿದ್ದನು. ಕೊಟ್ಟಿಗೆಯಲ್ಲಿ ಹಸುವಿನ ಹಾಲು ಕರೆಯುವಾಗ ಆಡುವ ಅವರ ನಗೆ ಅವರಿಬ್ಬರ ಬಗ್ಗೆ ಗಾಢವಾದ ಗುಮಾನಿ ಉಂಟುಮಾಡಿದ ರೀತಿಯಲ್ಲಿ ಸಲಿಗೆ ಇರುವುದು ಕಂಡುಬರುತ್ತಿತ್ತು.

ಹಳ್ಳಿಯಲ್ಲಿ ಯಜಮಾನ ಮತ್ತು ಆಳು ಇವರ ನಡುವೆ ಬಹಳ ಅಂತರವಿರುವುದನ್ನು ನಾವು ಕಾಣಬಹುದು. ಚಿಕ್ಕ ಮಕ್ಕಳು ದಣಿಯ ಮನೆಯಲ್ಲಿ ದುಡಿಯುತ್ತ ತನ್ನ ಬಾಲ್ಯದ ಸಂತೋಷವನ್ನು ಕಳೆದುಕೊಂಡು ದೇಹವನ್ನು ಕುಗ್ಗಿಸಿಸುತ್ತಿದ್ದರು. ಬಡತನ ಎಂಬ ದಾರಿದ್ರ್ಯವನ್ನು ತೊಡೆದು ಹಾಕಿದರೆ ಮನುಷ್ಯ ಮನುಷ್ಯನ ನಡುವೆ ನಾವು ಅಂತರ ಕಾಣುವುದಿಲ್ಲ. ಸರ್ವ ಸಮಾನರಾಗಿ ಜೀವಿಸುವ ಅವಕಾಶವಿರುತ್ತದೆ. ಮನುಷ್ಯ ತನ್ನ ಬದುಕಿನಲ್ಲಿ ಈ ಜಾತಿ ಬೇಧವನ್ನು ಹುಟ್ಟುಹಾಕಿಕೊಂಡು ಮಾನವನಾಗುವ ಬದಲು ರಾಕ್ಷಸನಾಗಿ ಜೀವಿಸುತ್ತಿರುವುದನ್ನು ಕಾಣಬಹುದು.

'ದನಿ' ಹೆಣ್ಣು ಸಂಸಾರದ ಕಣ್ಣು ಮಮಕಾರ ಮಡಿಲು, ಸಹನಾಮೂರ್ತಿ ನಮ್ಮ ಹಳ್ಳಿಯಲ್ಲಿ ಸಂಸಾರದ ಹೆಚ್ಚು ಹೊಣೆಯನ್ನು ಹೆಣ್ಣು ಹೊಂದಿರುತ್ತಾಳೆ. ಪ್ರತಿಯೊಂದು ಹಳ್ಳಿಯ ಹೆಣ್ಣು ಮಗಳ ಹಣೆಬರಹವೆ ಇದು. ಮಬ್ಬಿಗೆ ಎದ್ದ ಕೆಂಚವ್ವ ಓಣಿ ಕಡೆ ಹೊಗಿ ಮನೆಗೆ ಬಂದು ಹಳೇನೀರು ತೆಗೆದುಕೊಂಡು ಅಂಗಳದಲ್ಲಿ ಬಿದ್ದಿದ್ದ ಪುಳ್ಳೆಸೌದೆ ತಂದು ಒಳಬಂದು ಒಲೆ ಹಚ್ಚತೊಡಗಿದಳು. ಆಕೆ ದಿನಾಲೂ ಕೊಟ್ಟಿಗೆಯಲ್ಲೇ ಕಾಲನೂಕಿ ಕೂಲಿಹೋಗುತ್ತಿದ್ದರಿಮದ ಇವತ್ತಾದರೂ ಹೋಗುವುದರೊಳಗಾಗಿ ಒಂದು ಚೂರು ಬಿಸಿಬಿಸಿ ಕೂಳನ್ನಾದರೂ ಬೇಯಿಸಿ ಮಕ್ಕಳಿಗೂ ಉಣ್ಣಿಸಿ ತಾನೂ ಉಂಡುಹೋಗುವ ಎಂದುಕೊಂಡು ತನ್ನ ಮನೆ ಹುಂಜ ಬೆಳಗಿನ ಜಾವ ಕಡೆ ಕೂಗಾಗಿ ಕೂಗಿದಾಗಲೇ ಎದ್ದಿದ್ದಳು.

ಈಕೆ ತನ್ನ ಮಕ್ಕಳನ್ನು ಓದಿಸಬೇಕೆಂಬ ಆಸಕ್ತಿಯಿಂದ ಕೆಂಚವ್ವ ತನ್ನ ಮಗಳನ್ನು ಶಾಲೆಗೆ ಕಳುಹಿಸಿ ಅವಳು ಹೋಗಿ ಬರುವಾಗ ಅವಳ ಅಂದ ಚೆಂದ ನೋಡಿ ಸಂತೊಷಪಡುತ್ತಾಳೆ. ಆದರೆ ಅವಳ ಗಂಡ ಹೆಂಡತಿ ಮಕ್ಕಳನ್ನು ಬಿಟ್ಟು ದೇಶಾಂತರ ಹೋಗಿದ್ದರಿಂದ ಕೂಲಿನಾಲಿ ಮಾಡದೆ ಅವಳ ಜೀವನ ಸಾಗುವುದಿಲ್ಲ. ಕೂಲಿಗೆ ಹೋದಾಗ ಅವಳ ಚಿಕ್ಕ ಮಕ್ಕಳನ್ನು ನೋಡಿಕೊಳ್ಳುವುದಕ್ಕಾಗಿ ಶಾಲೆಗೆ ಹೋಗುವ ಮಗಳನ್ನು ಶಾಲೆ ಬಿಡಿಸಿ ಮಕ್ಕಳ ಜೋಪಾನ ಮಾಡುವ ಜವಾಬ್ದಾರಿಯನ್ನು ಹೊರಿಸುತ್ತಾಳೆ. ಕೂಲಿ ಮಾಡುವ ತಾಯಿಯಾದರೂ ತನ್ನ ಮಕ್ಕಳ ಮೇಲೆ ತನ್ನ ಪ್ರಾಣವನ್ನು ಇಟ್ಟುಕೊಂಡಿರುತ್ತಾಳೆ. ಕೂಲಿಗೆ ಹೋದರು ತನ್ನ ಮಕ್ಕಳ ತವಕದಿಂದ ಕೂಡಿರುತ್ತಾಳೆ.

'ತಾಯಿಗಿಂತ ಮಿಗಿಲಾದ ದೇವರಿಲ್ಲ' ಎಂಬ ಮಾತಿನಂತೆ ನಮಗೆ ಜನ್ಮ ನೀಡಿದ ತಾಯಿ ಆರಾಧಿಸುವುದು ನಮ್ಮ ಕರ್ತವ್ಯ. ಆ ಋಣವನ್ನು ತೋರಿಸಿಕೊಳ್ಳುವುದಕ್ಕಾಗಿ ಸ್ವಲ್ಪ ದಿನವಾದರೂ ಅವಳ ಸುಖಸಂತೋಷದಿಂದ ನೋಡಿಕೊಳ್ಳಬೇಕೆಂಬ ಹಂಬಲದಿಂದ ಪಟ್ಟಣದಲ್ಲಿರುವ ಮಗ ಕರೆದುಕೊಂಡು ಹೋದ ಸಂದರ್ಭದಲ್ಲಿ ಆಗುವ ಅನಾಹುತಗಳು ಕರೀಗೌಡರ 'ಅವ್ವ' ಕತೆಯಲ್ಲಿ ನೋಡಬಹುದು.

'ಅವ್ವ' ಕತೆಯಲ್ಲಿ ಮಗ ಆಫೀಸಿನಿಂದ ಮನೆಗೆ ಬಂದ ತಕ್ಷಣದಲ್ಲಿ "ನನಗೆ ಈ ಪಟ್ಣದಲ್ಲಿ ಇರೋಕೆ ಆಗಲ್ಲ. ಈ ಕರೆಂಟಲ್ಲಿ ಬೇಯಿಸೋ ಕೂಳು, ಕಕ್ಕಸ್ ಮನೆ ಕರೆಂಟಲಿ ಕಾಸಿದ ನೀರು ಫ್ಯಾನ್‌ಗಾಳಿ, ಅದೆಂತದೋ ಹಾಸ್ಗೆ ಇವೆಲ್ಲಾ ನನಗೆ ಕಕರು ಮಕರು ಹಿಡಿಸಿಬಿಟ್ಟಿವೆ. ಒಂದು ವಾರ ಇದ್ದ ನನಗೆ ಒಂದು ಯುಗಾನೇ ತುಂಬಿಸಿದಂತಾಗಿದೆ. ಮೊದಲು ನನ್ನ ಊರ್ಗೆ ಬಸ್ಸು ಹತ್ತಿಸ್ತಿಯಾ?" ಎಂದಳು.

ಹಳ್ಳಿಗಾಡಿನ ಮಣ್ಣಿನಲ್ಲಿ ಹುಟ್ಟಿ ಬೆಳೆದ ತಾಯಿಗೆ ತಮ್ಮ ಊರೇ ಸ್ವರ್ಗ ಅದನ್ನು ಮೀರಿಸುವಂತಹದು ಯಾವುದು ಇಲ್ಲ. ಹೊಲ, ಗದ್ದೆ, ತೋಟಗಳೇ ಅವರ

ಒಡನಾಟವಾಗಿರುತ್ತದೆ. ಅಲ್ಲಿನ ವ್ಯವಸ್ಥೆಗೆ ಹೊಂದಿಕೊಂಡಿರುವ ಮಂದಿಗೆ ನಗರ ಪ್ರದೇಶದ ಯಾಂತ್ರಿಕ ಬದುಕು ಹೊಂದಿಕೊಳ್ಳವುದಿಲ್ಲ ಇಲ್ಲಿ ಎಷ್ಟೇ ಸೌಕರ್ಯಗಳಿದ್ದರೂ ಹಳ್ಳಿಯೇ ಅವರಿಗೆ ಹೆಚ್ಚು. ಹಳ್ಳಿಯಲ್ಲಿ ತಂದೆ, ತಾಯಿ, ಮಕ್ಕಳು ಬೇರೆಯಾಗುವುದು ಸಾಮಾನ್ಯವಾಗಿತ್ತು. ತಾಯಂದಿರು ತನ್ನ ಕಿರಿಯ ಮಗನ ಮನೆಯಲ್ಲಿ ಇರುತ್ತಾರೆ. ಹಳ್ಳಿಯಲ್ಲಿನ ಹೆಣ್ಣುಮಕ್ಕಳನ್ನು ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡಿಕೊಳ್ಳುವ ಪದ್ಧತಿಯಿತ್ತು. ಅಲ್ಲಿನ ಹೆಂಗಸರಿಗೆ ಎಪ್ಪತ್ತು ಆಗಿದ್ದರೂ ಕಣ್ಣು ಚೆನ್ನಾಗಿ ಕಾಣುತ್ತದೆ. ತಲೆ ಕೂದಲು ಅಲ್ಲೊಂದು ಇಲ್ಲೊಂದು ಬೆಳ್ಳಗಾಗಿದ್ದವು. ಇಲ್ಲಿನ ಹೆಂಗಸರು ಹುಟ್ಟಿದ ಊರು ಸೇರಿದ ಊರನ್ನು ಬಿಟ್ಟರೆ ಬೇರೆ ಯಾವ ಊರನ್ನು ನೋಡಿರುವುದಿಲ್ಲ. ಈ ತಾಯಂದಿರು ಪಟ್ಟದ ಮಗನ ಮನೆಯಲ್ಲಿದ್ದರು ಕನವರಿಕೆ ಮಾತ್ರ ನಮ್ಮ ಊರಿಗೆ ಹೋಗಬೇಕೆಂಬುವುದು.

ತನ್ನ ಮಗನ ಮೇಲೆ ಅಪಾರ ಪ್ರೀತಿಯಿದ್ದರೂ ಕೂಡ ಅವರಿಗೆ ಹಳ್ಳಿಯ ಜೀವನವೇ ಒಗ್ಗುತ್ತದೇ ವಿನಃ ಪಟ್ಟಣವಲ್ಲ. ನಗರ ಎ.ಸಿ. ಗಾಳಿಗಿಂತ ಹಳ್ಳಿಯ ಹೊಂಗೆ ಮರದ ನೆರಳಲ್ಲಿ ಆರಾಮವಾಗಿ ನಿದ್ದೆ ಹೋಗುತ್ತಾರೆ. ಪಟ್ಟಣದ ಮೃಷ್ಟಾನ್ನ ಭೋಜನಕ್ಕಿಂತ ಹಳ್ಳಿಯ ರಾಗಿ ಮುದ್ದೆ ರುಚಿ. ಅದರ ಘಮ್ಮತ್ತೆ ಬೇರೆ ಎಂಬಂತೆ. ಅರೆಗಳಿಗೆಯೂ ಕೂಡ ಪಟ್ಟಣದಲ್ಲಿ ಇರಲು ಬಯಸುವುದಿಲ್ಲ. ಇದು ಹಳ್ಳಿಗರ ಮನಸ್ಥಿತಿಯಾಗಿರುತ್ತದೆ.

**'ಕಳಕಳಿ'** ಈ ಕತೆಯಲ್ಲಿ ಓದುವ ತವಕವಿರುವ ಮಗು ಪರೀಕ್ಷೆ ಸಮಯದಲ್ಲಿ ಓದಲು ಬೆಳಗಿನ ಜಾವ ಎದ್ದು ಒದಲು ಕೂರುವಾಗ ನಿಮ್ಮಪ್ಪನ್ನ ಏಳ್ಸು, ಏಳ್ಸಿ ದೀಪ ಹಚ್ಚಿಸ್ಕೋ ಎಂದು ಮಗನಿಗೆ ಪ್ರೇರೇಪಿಸುತ್ತಾನೆ. ಆದಾಗ್ಯೂ ಮನೆಯ ಕೆಲಸವನ್ನೆಲ್ಲಾ ಮಾಡಿ ಓದಲು ಹೋಗುವಾಗ ನೀನು ಹೆಣ್ಣು ಮಗುವಾಗಿದ್ದರೆ ಎಷ್ಟು ಚೆಂದಾಗಿರುತ್ತಿತ್ತು ಎಂದು ಮನದಲ್ಲಿ ಅಂದುಕೊಳ್ಳುವುದು ನಾವು ಕಾಣಬಹುದು. ಪರೀಕ್ಷೆ ಬರೆಯಲು ಪೆನ್ನು ಇಲ್ಲದೆ ಕಳೆದುಹೋದಾಗ "ಪೆನ್ನಂತೆ ಪೆನ್ನಿಲ್ವಂತೆ ಬರೆಯೋದಿಕ್ಕೆ" ಇವತ್ತು ಪರೀಕ್ಷೆಯಂತೆ ಎಂದಳು 'ಪೆನ್ನು! ಏನಾಯ್ತಂತೆ ತಕ್ಕೊಟ್ಟಿದ್ನಲ್ಲ ತಕ್ಕೊಟ್ಟಿನ್ನೂ ವರ್ಷ ಕೂಡ ಆಗಿಲ್ಲ! ಏನ್ಮಾಡಿದ್ನಂತೆ?" ಎಂದು. ಹೆಂಡತಿಗೆ ಆಗ ಅಪ್ಪನ ಸಿಟ್ಟು ಮಗನಿಗೆ ಭಯ ತಂದಿತು. "ತೀರ್ರ್ಯೋಯ್ತಂತೆ!" ಎಂದಳು ಆಕೆ ತೀರ್ರ್ಯೋಯ್ತಂತ ತಗೋತಾನೆ ಬಾ! ಅವನಿಗೇನು ಕಡಿಮೆ? ಅವರಪ್ಪ ತುಂಬ ಸಾಪ್ಕಾರ!" ಎಂದು ದನಿಯನ್ನು ಸಣ್ಣಗೆ ಮಾಡಿದ. ಆ ಮಗುವಿನ ಕಷ್ಟಕ್ಕೆ ಸ್ಪಂದಿಸುವವಳು ತಾಯಿ. ಈಕೆಯು ದೇವರಿಗೆ ಹರಕೆಗೆ ಎಂದು ಬಿಟ್ಟಿದ್ದ ಕೋಳಿಯನ್ನು ಮಾರಿ ಅದರಿಂದ ಪೆನ್ನನ್ನು ತೆಗೆದುಕೊಡುತ್ತಾಳೆ. ಮಕ್ಕಳ ಬಾಳಿನಲ್ಲಿ ತಾಯಿಯ ಪಾತ್ರ ಪ್ರತಿಯೊಂದು ಹಂತದಲ್ಲೂ ಬಹಳ ಮುಖ್ಯವಾಗಿರುತ್ತದೆ. ಮಕ್ಕಳ ಏಳಿಗೆಯಲ್ಲಿ ತಂದೆಗಿಂತ ತಾಯಿಯ

ಮಾರ್ಗದರ್ಶನ ಹೆಚ್ಚಾಗಿರುತ್ತದೆ. ಮಕ್ಕಳ ಹೆಚ್ಚಿನ ಜವಾಬ್ದಾರಿಯನ್ನು ಹೊತ್ತು ಅವರ ಬಾಳನ್ನು ಬೆಳಗಲು ಅವಳು ಪಡುವ ಕಷ್ಟ ಎಷ್ಟೆಂದರೂ ಸಾಲದು. ಎಲ್ಲರ ಮಕ್ಕಳಂತೆ ನಮ್ಮ ಮಕ್ಕಳು ಚೆನ್ನಾಗಿ ಓದಬೇಕು ನಾವು ಪಡುವ ಕಷ್ಟ ನಮ್ಮ ಮಕ್ಕಳಿಗೆ ಬಾರದು ಎಂದು ಸದಾ ತವಕಿಸುತ್ತಾಳೆ. ನಾವು ಯಾರನ್ನು ಮರೆತರೂ ತಾಯಿಯನ್ನು ಮಾತ್ರ ಮರೆಯಬಾರದು. ಇದನ್ನು ನಿಜವಾಗಲೂ ಅರ್ಥ ಮಾಡಿಕೊಂಡಿರುವುದು ಹಳ್ಳಿಗರು.

**'ಕಲ್ಯಾಣಿ'** ಕತೆಯಲ್ಲಿ ಕುಡಿತದಿಂದ ಆಗುವ ಪರಿಣಾಮವನ್ನು ನಾವು ನೋಡಬಹುದು. ಹಳ್ಳಿಗಳಲ್ಲಿ ಸಾಮಾನ್ಯವಾಗಿ ಕುಡಿತದ ಚಟಕ್ಕೆ ಬಲಿಯಾಗಿರುತ್ತಾರೆ. ಒಂದು ಹೆಣ್ಣಿನ ಮದುವೆ ಮಾಡುವ ಮೊದಲು ಅವಳನ್ನು ಪ್ರೇರೇಪಿಸುವ ಸಲುವಾಗಿ 'ರಂಗಣ್ಣ ಒಬ್ಬನೇ ಮಗ, ತಂದೆ, ತಾಯಿ, ಅಣ್ಣ, ತಮ್ಮ, ತಂಗಿ ಯಾರು ಇಲ್ಲದ ಒಬ್ಬಂಟಿ. ಆದ್ದರಿಂದ ನಿನಗೆ ಅತ್ತೆ ಮಾವರ ಕಾಟವಾಗಲಿ, ಅತ್ತಿಗೆ ನಾದಿನಿಯರ ತೊಂದರೆಯಾಗಲಿ, ಭಾವಮೈದುನರ ಕಿರುಕುಳವಾಗಲೀ ಇರುವುದಿಲ್ಲ. ನೀನು ಕುಡಿದ ನೀರು ಸಹ ಅಲುಗಾಡದಂತೆ ಸುಖವಾಗಿ ಇರಬಹುದು ಎಂದಾಗ ಕಲ್ಯಾಣಿಗೆ ಅವರು ಹೇಳುವುದೆಲ್ಲಾ ನಿಜ ಅನ್ನಿಸಿತ್ತು. ಆಮೇಲೆ ಆತನ ಆಸ್ತಿ ಹಣದ ಪ್ರಶ್ನೆ ಬಂದಾಗ "ನಿಜ, ಆತನಿಗೆ ಆಸ್ತಿ ಕಡಿಮೆ, ಒಂದು ಎಕರೆ ಹೊಲ ಮಾತ್ರ ಇದೆ. ಒಂದು ಅಂಕಣ ಮನೆ ಇದೆ. ನಾಳೆ ನೀನು ಬುದ್ಧಿವಂತೆಯಾದರೆ ಇನ್ನೂ ಆಸ್ತಿ ಹಣವನ್ನೆಲ್ಲಾ ಸಂಪಾದಿಸ-ಬಹುದು. ಮನೆನೂ ಕಟ್ಟಿಕೊಳ್ಳಬಹುದು" ಎಂದರು. ಅದೂ ಆಕೆಗೆ ಸರಿ ಅನ್ನಿಸಿತ್ತು.

ಅನೇಕ ಆಸೆ ಆಕಾಂಕ್ಷೆಗಳನ್ನು ಹೊತ್ತು ಮದುವೆಯಾದ ಹೆಣ್ಣು ಮಗಳು. ಮದುವೆಯಾದ ನಂತರ ಕುಡಿತ, ಇಸ್ಪೀಟು, ಈ ಎರಡು ಹವ್ಯಾಸಗಳಿವೆ ಎಂದು ತಿಳಿದ ಇವು ಮದುವೆಗೆ ಮುಂಚೆ ಇದ್ದ ಚಟಗಳು ಎಂದು ತಿಳಿಸಿದರೂ ಅದನ್ನು ಬಿಡಿಸಲು ದೇವರು ದಿಂಡಿರಿಗೆ ಮಾಡಿಸುವುದು ನಾವು ಕಾಣಬಹುದು. ಅಕೆಯು ದೇವರಿನ ಬಗ್ಗೆ ಅಪಾರವಾದ ನಂಬಿಕೆಯನ್ನು ಇಟ್ಟುಕೊಂಡು ಈ ಕಾರ್ಯವನ್ನು ನೆರವೇರಿಸುತ್ತದೆ ಎಂಬ ದೃಢ ವಿಶ್ವಾಸ ತನ್ನ ಕುಡುಕ ಗಂಡನು ಮಾಡಿದ ಸಾಲವನ್ನೇ ಕೂಲಿ ಮಾಡಿ ಅದನ್ನು ತೀರಿಸುವ ಜವಾಬ್ದಾರಿಯನ್ನು ಹೊತ್ತುಕೊಂಡು ಸಂಸಾರವನ್ನು ಸರಿದೂಗಿಸಿಕೊಂಡು ಹೋಗುವ ಹೆಣ್ಣುಮಕ್ಕಳು ನಮ್ಮಲ್ಲಿದ್ದಾರೆ.

ಕುಡಿತಕ್ಕೆ ಒಳಗಾದವರು ಇರುವ ಆಸ್ತಿಯನ್ನು ತನ್ನ ಕುಡಿತಕ್ಕಾಗಿ ಹಾಳು ಮಾಡುತ್ತಾನೆ. ಪಶುಪಾಲನೆ ಮಾಡಿಕೊಂಡು ಜೀವನ ಸಾಗಿಸುವ ಎಂದರೆ ಮನೆಯಲ್ಲಿದ್ದ ಕುರಿ, ಮೇಕೆ, ಸಣ್ಣ ಪುಟ್ಟ ದನಕರುಗಳನ್ನು ಮಾರಿಕೊಂಡು ಇರುವ ಒಂದು ಅಂಕಣ ಮನೆಯನ್ನು ಬೋಗ್ಯ ಮಾಡುವುದನ್ನು ಕಾಣಬಹುದು. ಕುಡಿದು ಕುಡಿದು ನಿಂತರೆ ಕೂರಲು ಆಗದೆ ಕೂತರೆ ನಿಲ್ಲಲಾಗದೆ ಬಹಳ ಕುಂದುಹೋಗುತ್ತಾರೆ. ಬೆಳಿಗ್ಗೆಯೆಲ್ಲಾ ಇಸ್ಪೀಟು ಆಡಿ ಮಾಡಿದ ಸಾಲದ ಯೋಚನೆ ಮರೆಯಲು ಸಂಜೆ

ಕುಡಿದು ಬೀಳುವುದು ಸಹಜವಾಗಿತ್ತು. ಈ ರೀತಿಯ ಕುಡಿತ ಚಟಕ್ಕೆ ಬಲಿಯಾದ ಗಂಡನಿಂದ ಯಾವ ರೀತಿಯ ಸುಖವನ್ನು ಕಾಣದೆ ದಿಕ್ಕು ತೋಚದಾದಳು. ಕುಡಿತ ಇಸ್ಪೀಟು ಜೊತೆಗೆ ಕಳ್ಳತನ ಆರಂಭಿಸಿದ. 'ಕಳ್ಳನ ಹೆಂಡತಿ ಯಾವತ್ತಿದ್ರೂ ಮುಂಡೇ" ಎಂಬಂತೆ ದೃಢನಿರ್ಧಾರ ಮಾಡಿದಳು.

ಕುಡುಕನ ಕಟ್ಟಿಕೊಂಡ ತಪ್ಪಿಗೆ ಕೂಲಿ ಮಾಡಿ ತನ್ನ ಮಕ್ಕಳೊಂದಿಗೆ ಗಂಡನನ್ನು ಸಾಕುತ್ತಿದ್ದಳು. ತನ್ನ ಗಂಡ ಸಾಯುವಂತೆ ಆಗಿರುವುದನ್ನು ಕಂಡು ಕಂಗಾಲಾಗಿದ್ದಳು. ಆತನಿಗೆ ಊಟ ಹಾಕಿ ತಲೆಗೆ ಕೈಎಣ್ಣೆ ಹಾಕಿ ನೀರು ಕಾಯಿಸಿ ಸ್ನಾನ ಮಾಡಿಸುತ್ತಿದ್ದಳು. ನಮ್ಮ ಹೆಂಗಳೆಯರ ಈ ಭಾವನೆ ನಗರಪ್ರದೇಶ ಹೆಣ್ಣುಗಳಲ್ಲಿ ಕಂಡುಬರುವುದು ಕಡಿಮೆ. ನಮ್ಮ ಹಳ್ಳಿಗಾಡಿನ ಹೆಣ್ಣು ಮಕ್ಕಳಿಗೆ 'ಪತಿಯೇ ಪರದೈವ' ಎಂಬ ಭಾವನೆಯನ್ನು ಮೈಗೂಡಿಸಿಕೊಂಡು ಬಂದಿದ್ದಾರೆ. ಮಗಳು ಗಂಡನ ಮನೆಯಲ್ಲಿ ಪಡುವ ಕಷ್ಟವನ್ನು ನೋಡಲಾರದೆ ಆಕೆಯ ತಾಯಿ ತಮ್ಮ ಮನೆಗೆ ಬರುವಂತೆ ಪ್ರೇರೇಪಿಸಿದಾಗ ಅವಳು ಅಮ್ಮನ ಮಾತನ್ನು ನಿರಾಕರಿಸುತ್ತಾಳೆ. ತಾಯಿ ಮನೆಯ "ತುಪ್ಪ ಅನ್ನಕ್ಕಿಂತ ತನ್ನ ಗಂಡನ ಮನೆ ಗಂಜಿಯೇ ಲೇಸು" ಎಂಬಂತೆ ಅಲ್ಲೇ ಇದ್ದುಕೊಂಡು ಅವಳ ಜೀವನವನ್ನು ಸಾಗಿಸಲು ನಿರ್ಧರಿಸುತ್ತಾಳೆ. ಅವಳು ಜೀವನದುದ್ದಕ್ಕೂ ನೋವನ್ನು ಕಂಡು ಅನುಭವಿಸಿದ ಆಕೆಗೆ ಜೀವನವೇ ಬೇಸರಗೊಂಡಳು ಮಕ್ಕಳೊಂದಿಗೆ ಬಾವಿಗೆ ಬೀಳುವ ನಿರ್ಧಾರವನ್ನು ಕೈಗೊಂಡಳು. ನಮ್ಮ ಹಳ್ಳಿಯ ಎಷ್ಟು ಮಂದಿ ಹೆಂಗಸರು ಅವರು ಅನುಭವಿಸುವ ಅವಮಾನವನ್ನು ಸಹಿಸದೇ ಅಸುನೀಗುತ್ತಾರೆ. ಹೀಗೆ ಅನೇಕ ಕನಸುಗಳನ್ನು ಹೊತ್ತುಕೊಂಡು ಗಂಡನ ಮನೆ ಸೇರಿದ ಹೆಂಗಳೆಯರಿಗೆ ನರಕದ ಬಾಗಿಲು ತೆಗೆದಂತೆ ಕ್ಷಣ ಮಾತ್ರವು ಸುಖವಿಲ್ಲದೆ ನರಳುವುದನ್ನು ನಾವು ಕಾಣಬಹುದು. 'ಕರಿಮಣ್ಣಿನ ಗೊಂಬೆಗಳು' ಹಳ್ಳಿಗಳು ಮೂಢನಂಬಿಕೆಯಲ್ಲಿ ಸಿಕ್ಕಿ ನಲುಗುತ್ತಿರುವುದಕ್ಕೆ ಈ ಕತೆ ಸಾಕ್ಷಿಯಾಗಿದೆ. ಇಲ್ಲಿಯ ಜನರ ಮುಖ್ಯ ಕಸುಬು ವ್ಯವಸಾಯ, ಜೊತೆಗೆ ಪಶುಪಾಲನೆಯನ್ನು ನಡೆಸುವುದನ್ನು ನಾವು ಕಾಣಬಹುದು. ಬೀಚನ್ನಳ್ಳಿ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಸರ್ವೇಸಾಮಾನ್ಯವಾಗಿ ಹಿಪ್ಪನೇರಳೆಯನ್ನು ಬೆಳೆಯುವುದನ್ನು ನಾವು ಕಾಣುತ್ತೇವೆ. ನೂರು ಹಿಪ್ಪನೇರಳೆ ಹುಳು ಸಾಕುವ ಬದಲಿಗೆ ಮುನ್ನೂರು ಹಿಪ್ಪನೇರಳೆ ಹುಳು ಸಾಕಲು ತೊಡಗಿದಾಗ ಹುಳಗಳೆಲ್ಲ ಸತ್ತುಹೋಗುತ್ತವೆ. ಇದಕ್ಕೆ ವೈಜ್ಞಾನಿಕ ರೀತಿಯಲ್ಲಿ ಯೋಚಿಸದೆ ಮಾಟಮಂತ್ರದ ಆಧಾರ ಕೊಡುತ್ತಾ ಹೋಗುತ್ತಾರೆ.

ಕಾಡಣ್ಣನ ಹೆಂಡತಿ ಸತ್ತ ಹುಳುವಿನ ಬಗ್ಗೆ ತನಗೆ ಬಂದ ಅನುಮಾನವನ್ನು ತನ್ನ ಗಂಡನ ಹತ್ತಿರ ಹೇಳುವುದಕ್ಕೆ ಹಿಂಜರಿಯಲ್ಲಿ ರಾತ್ರಿ ಊಟವಾದ ಮೇಲೆ ಗಂಡನಿಗೆ ಹೇಳಿದಳು. "ನಾಳೆ ಮಧ್ಯಾಹ್ನದ ಮೇಲೆ ದುರ್ಗಕ್ಕೆ ಹೋಗಿ ಒಂದು ಮಾತು ಶಾಸ್ತ್ರ ಕೇಳ್ಕೊಂಡು ಬನ್ನಿ ನನಗೆ ಯಾಕೋ ಅನುಮಾನ ಇದೆ. ನನ್ನ ಸವತಿ ಅವಳು!

ಏನಾದರೂ ಮಾಡಿಗೀಡಿಸಿ ಬಿಟ್ಟಿದ್ದಾಳೋ ಏನೋ!" ಎಂದಳು. ಆಕೆಗೆ ತನ್ನ ಗಂಡನ ಹಿರಿಯ ಹೆಂಡತಿ ಜಗಳ ಮಾಡಿಕೊಂಡು ಬೇರೆ ಇದ್ದದ್ದರಿಂದ ಅವಳು ಏನಾದರೂ ಮಾಟಮಂತ್ರ ಮಾಡಿಸಿರಬಹುದು ಎಂಬ ನಂಬಿಕೆ. ಊರಿನಲ್ಲೆಲ್ಲಾ ತನ್ನ ಮಗನಿಗೆ ಭಾಗ ಕೊಡದೆ ಇದ್ದರೆ ತನ್ನ ಗಂಡನಿಗೆ ದೇವರು ಮಾಡಿಸ್ತೀನಿ ಎಂದು ಹೇಳಿಕೊಂಡು ಓಡಾಡುತ್ತಿದ್ದಳಂತೆ.

ಮೂಢನಂಬಿಕೆಯ ಮೇಲೆ ಬಹಳ ವಿಶ್ವಾಸವನ್ನು ಇಟ್ಟುಕೊಂಡಿದ್ದ ಕಾಡಣ್ಣ ದುರ್ಗದ ಪೂಜಾರಯ್ಯರನ ಬಳಿ ಹೋಗಿ ಪೂಜಾರಯ್ಯ ಹೇಳಬೇಕಾದುದನ್ನು ಅವನೇ ಬಾಯಿಂದಲೇ ನಡೆದಿರುವ ಹೊನ್ನಾರದ ಬಗ್ಗೆ ತಿಳಿಸಿದ ಅದನ್ನು ದುರುಪಯೋಗ-ಪಡಿಸಿಕೊಳ್ಳುವ ಪೂಜಾರಿಗಳು ಪೂಜೆ ಮಾಡಬೇಕು. ನಿಮ್ಮ ಹೊಲದಲ್ಲಿರುವ ಗೊಂಬೆಗಳನ್ನು ಕೀಳಬೇಕು ಎಂದು ಹೇಳಿದ ಪೂಜೆಗೆ ಬೇಕಾದ ದವಸಧಾನ್ಯಗಳ ಬಗ್ಗೆ ಹೇಳಿದ ಗೊಂಬೆ ಕೀಳಬೇಕಾದರೆ ಅದಕ್ಕೆ ದುಡ್ಡು ಕೊಡಬೇಕು ಎಂದು ತಾಕಿತು ಮಾಡಿದ, ಈ ಪೂಜೆ ಪುನಸ್ಕಾರದ ಮರ್ಮವನ್ನು ಅರಿಯದ ಹಳ್ಳಿ ಮುಗ್ಧ ಜನರು ಸಾವಿರಾರು ರೂಪಾಯಿಗಳನ್ನು ಕೊಡುತ್ತಾರೆ. ಇಲ್ಲಿ ಮೊದಲೇ ವ್ಯವಸಾಯದಲ್ಲಿ ನಷ್ಟ ಅನುಭವಿಸಿದರು. ಅದರ ಜೊತೆಗೆ ಪೂಜೆಗೆ ಎಂದು ಮತ್ತಷ್ಟು ಸಾಲಮಾಡಬೇಕಾಗಿ ಬಂತು. ನಮ್ಮ ಜನ ಎಲ್ಲಿಯವರೆವಿಗೂ ಈ ಹಳೆಯ ಮೂಢನಂಬಿಕೆಗಳನ್ನು ಬಿಡದೆ ಹಣವನ್ನು ವ್ಯಯಮಾಡುತ್ತಾರೋ, ಅಲ್ಲಿಯವರೆವಿಗೂ ಈ ಜನರ ಉದ್ಧಾರ ಸಾಧ್ಯವಾಗುವುದಿಲ್ಲ.

'ಗುಣಮುಖ' ಮಲಗಿದ್ದಾಗ ಇದ್ದಕ್ಕಿದ್ದಂತೆ ರಾತ್ರಿ ಹೊತ್ತು ಎಡತೊಡೆಯಲ್ಲಿ ಖಾಸಿ ಬರುವುದಕ್ಕೆ ಶುರುವಾಯ್ತು, ನಾನು ಉಷ್ಣಕ್ಕಿರಬೇಕು ಅಂದುಕೊಂಡು ತಲೆಗೆ ಊರಿನಿಂದ ಅವ್ವ ಕಳಿಸಿದ್ದ ಕೈಯೆಣ್ಣೆ ತಿಕ್ಕಿ ಸ್ನಾನ ಮಾಡಿದೆ; ಸ್ನೇಹಿತರು 'ಬಿಯರ್‌ಕುಡಿ ತಂಪಾಗುತ್ತೇ' ಅಂದದ್ದಕ್ಕೆ ಬಿಯರ್‌ನ್ನೂ ಕುಡಿದೆ. ಆದರೆ ಏನು ಮಾಡಿದರೂ ಎಡತೊಡೆಯಲ್ಲಿ ಕಾಣಿಸಿಕೊಂಡ ಬಿಸಿ ಮಾತ್ರ ಸಣ್ಣಗಾಗಲಿಲ್ಲ. ಮನಸ್ಸಿಗೆ ನೆಮ್ಮದಿ ಬರಲಿಲ್ಲ. ಅದು ದಿನೇ ದಿನೇ ಜಾಸ್ತಿಯಾಗುತ್ತಲೇ ಹೋಯ್ತು. ತೊಡೆಯ ಉರಿ ಹಗಲೆಲ್ಲಾ ಸುಮ್ಮಗಿದ್ದು, ರಾತ್ರಿಯೆಲ್ಲಾ ಜಾಸ್ತಿಯಾಗುತ್ತಿತ್ತು. ಬೆಂಕಿ ಹತ್ತಿಕೊಂಡಂತೆ ಹತ್ತಿಕೊಳ್ಳುತ್ತಿತ್ತು. ಅದರ ಉರಿಗೆ ರಾತ್ರಿಯೆಲ್ಲಾ ನಿದ್ದೆಯೇ ಬರುತ್ತಿರಲಿಲ್ಲ. ನನ್ನ ದುಃಖ ಮುಗಿಲು ಮುಟ್ಟುತ್ತಿತ್ತು. ಹೀಗೆ ಎಡತೊಡೆಯಲ್ಲಿ ಕಾಣಿಸಿಕೊಂಡ ಉರಿ ಕ್ರಮೇಣ ಎಡಗಾಲುದ್ದಕ್ಕೂ ಕಾಣಿಸಿಕೊಳ್ಳತೊಡಗಿತ್ತು. ದಿನೇ ದಿನೇ ಆ ಕಾಲೂ ಯಳವಾಗತೊಡಗಿತು.

ಈ ಒಂದು ಕಾಯಿಲೆ ಡಾಕ್ಟರ್ ಬಳಿ ತೋರಿಸುವ ಅಗತ್ಯವಿಲ್ಲವಂತೆ ನಾನು ಶಾಸ್ತ್ರ ಕೇಳಿ ಇನ್ನೊಂದು ತಿಂಗಳು ನಿಮಗೆ ಗ್ರಹಗತಿ ಸರಿಯಾಗಿಲ್ಲ ಯಾವ ಔಷಧಿ

ಕೊಡಿಸಿದರೂ ಅದು ದೇಹಕ್ಕೆ ಹತ್ತಲ್ಲ ನಾಳೆ ಅಮಾವಾಸ್ಯೆ ದಿನ ಮಠಕ್ಕೆ ಕರೆದುಕೊಂಡು ಹೋಗಿ ಒಂದು ಮಂತ್ರ ಹಾಕಿಸಿ ತಾಯತ ಕಟ್ಟಿಸಿ ನಿಂಬೆಹಣ್ಣು ಮಂತ್ರಿಸಿಕೊಂಡು ಬನ್ನಿ ಅಮೇಲೆ ಎಲ್ಲ ಸರಿಹೋಗುತ್ತೆ ಅಂದವರೆ ಅಮಾವಾಸ್ಯೆ ದಿನ ಮಠಕ್ಕೆ ಹೋಗಲು ತೀರ್ಮಾನಿಸುತ್ತಾರೆ. ಇಮತಹ ಕಲಿಯುಗದ ಕಾಲದಲ್ಲಿ ಶಾಸ್ತ್ರ ಸಂಬಂಧ ಎಂದು ಹೇಳಿ ಜನರನ್ನು ಮೋಸಗೊಳಿಸುವವರು ಇನ್ನೂ ಇದ್ದಾರೆ. ಆ ಮಠದ ಸ್ವಾಮಿಗಳಿಗೆ ಸಾವಿರಾರು ರೂಪಾಯಿ ವ್ಯಯ ಮಾಡುತ್ತಾರೆ. ಅವರು ಮಂತ್ರಿಸಿ ಕೊಡುವ ನಿಂಬೆಹಣ್ಣಿನಿಂದ ಎಲ್ಲಾ ಗುಣವಾಗುತ್ತದೆ ಎಂಬಂತೆ ಡಾಕ್ಟರ್ ಅಗತ್ಯವಿರುವುದಿಲ್ಲ. ವಿದ್ಯಾವಂತರಾದ ಕೆಲವೊಂದು ಸಲ ಅಂತವರ ಮಾತಿಗೆ ಮಾರುಹೋಗುತ್ತಾರೆ. ಇದನ್ನು ಗಮನಿಸಿದಾಗ ನಮ್ಮಲ್ಲಿ ಎಷ್ಟರಮಟ್ಟಿಗೆ ಮೌಢ್ಯತೆ ತಾಂಡವಾಡುತ್ತದೆ ಎಂಬುದನ್ನು ತಿಳಿಯಬಹುದು. ಹಳ್ಳಿಯಲ್ಲಿ ಇರುವ ಈ ಮೌಢ್ಯತೆಯನ್ನು ಹೋಗಲಾಡಿಸಬೇಕು. ಹಳ್ಳಿಯಲ್ಲಿರುವ ಈ ಮೂಢನಂಬಿಕೆಯನ್ನು ಬುಡಸಹಿತ ಕಿತ್ತುಹಾಕಬೇಕು.

ಹಳ್ಳಿಯ ಹೆಂಗಸರು ಮಠ, ಪೂಜಾರಯ್ಯನ ಮೇಲೆ ಇಟ್ಟಿರುವಷ್ಟು ನಂಬಿಕೆಯನ್ನು ದೇವರ ಮೇಲೆ ಇಟ್ಟಿರುವುದಿಲ್ಲ. ಮಠಕ್ಕೆ ತನ್ನ ಅಳಿಯನನ್ನು ಕರೆದುಕೊಂಡು ಹೋಗಿ ಮಠಾಧೀಶ ಈತ ಕೈಗೆ ಐದು ನಿಂಬೆಹಣ್ಣನ್ನು ಕೊಟ್ಟು 'ಇವುಗಳನ್ನು ನೀವು ಮಲಗುವ ತಲೆಯ ದಿಂಬಿನಡಿಯಲ್ಲಿ ಏಳುದಿನ ಇಟ್ಟುಕೊಳ್ಳಿ. ನಂತರ ಎಂಟನೆ ದಿನ ತೆಗೆದು ನದಿಗೆ ಬಿಟ್ಟುಬಿಡಿ!" ಎಂದರು. ಮಠದ ಸ್ವಾಮಿಗಳಿಗೆ ನೂರಾರು ರೂಪಾಯಿ ತಿನ್ನಿಸುತ್ತಾರೆ ಮತ್ತೆ ಅಲ್ಲಿ ಗುಣವಾಗದೆ ಹೋದರೆ ಇಂಗ್ಲಿಷ್ ಔಷಧಿಗಿಂತ ನಾಟಿ ಔಷಧಿ ಕೊಟ್ಟರೆ ಬೇಗ ಗುಣವಾಗುತ್ತದೆ ಎಂಬ ನಂಬಿಕೆಯಿಂದ ಲಕ್ವ ಹೊಡೆದಿರಬೇಕೆಂಬ ಊಹೆಯನ್ನು ಇಟ್ಟುಕೊಂಡು ಅವರ ಶರೀರಕ್ಕೆ ಯಾವುದೋ ಒಂದು ಎಣ್ಣೆಯನ್ನು ಸವರಿ ದೇಹದ ಎಲ್ಲಾ ಮೂಳೆಗಳಿಗೂ ಎಣ್ಣೆಯನ್ನು ಉಜ್ಜಿದರು. ಆ ಎಣ್ಣೆಯ ಬಗ್ಗೆ ವಿಚಾರಿಸಿದಾಗ ಆತನು ತನ್ನ ವ್ಯವಹಾರದ ಗುಟ್ಟನ್ನು ಬಿಟ್ಟುಕೊಡದೆ ಮಸಾಜು ಮಾಡುವ ರೀತಿ ಅದನ್ನು ಸವರುತ್ತ ನಟನೆ ಮಾಡುತ್ತಾರೆ. ನಂತರ ಬಿಸಿ ನೀರಿನಿಂದ ಅವನನ್ನು ಸ್ನಾನ ಮಾಡಿಸಿ ಕರಿ ಕುರಿ ಕಂಬಳಿಯನ್ನು ಹೊದಿಸಿ ಚೆನ್ನಾಗಿ ಬೆವರಬೇಕು ಎಂದು ಇದೇ ಮನೆಯಲ್ಲೂ ಕೂಡ ಮಾಡಬೇಕು ಜೊತೆಗೆ ಲಕೂನದ ಹಕ್ಕಿ ರಕ್ತ ನೋವು ಹೀರುವ ಜಾಗಕ್ಕೆ ಹಚ್ಚಿ ಅದರ ಮಾಂಸವನ್ನು ಸುಟ್ಟು ತಿನ್ನಬೇಕು ಎಂದು ಸಲಹೆ ಕೊಡುತ್ತಾನೆ.

ಈ ರೀತಿಯ ಚಿಕಿತ್ಸೆಯಿಂದ ಎಲ್ಲಾ ರೋಗಗಳು ಗುಣವಾಗುವ ಆಗಿದ್ದರೆ ಡಾಕ್ಟರ್ ಔಷಧಾಲಯಗಳು ಬಾಗಿಲು ಮುಚ್ಚಿ ಮನೆಯಲ್ಲೇ ಕೂರಬೇಕಿತ್ತು. ನಮ್ಮ ದೇಶದಲ್ಲಿ ತಂತ್ರಜ್ಞಾನ ಬೆಳೆದಿದ್ದರೂ ಕೂಡ ಹಳ್ಳಿ ಜನರ ಮೂಢ ನಂಬಿಕೆಗಳು

ಇಂದಿಗೂ ತೊಡೆದು ಹೋಗಿಲ್ಲ ಇವು ಜನರನ್ನು ಮನಸಿಕವಾಗಿ ದೈಹಿಕವಾಗಿ ಹಿಂಸಿಸುತ್ತವೆ. ಈ ಮೂಢನಂಬಿಕೆ ಎಂಬ ಭೂತವನ್ನು ಸಂಪೂರ್ಣವಾಗಿ ನಾಶ ಮಾಡದ ಹೊರತು ಹಳ್ಳಿಗಳ ಉದ್ಧಾರ ಸಾಧ್ಯವಿಲ್ಲ. ಮೂಢ ನಂಬಿಕೆಯಿಂದಾಗಿ ಸಾಲಸೋಲ ಮಾಡಿ ಇರುವ ಒಂದು ಎಕರೆ ಅರ್ಧ ಎಕ್ರೆ ಜಮೀನನ್ನು ಕಳೆದುಕೊಳ್ಳುವ ಹಂತಕ್ಕೆ ಬಂದು ತಲುಪಿದ್ದಾರೆ ನಮ್ಮ ಜನ.

**ಕರೀಗೌಡರ ಕತೆಯಲ್ಲಿ ಕಂಡುಬರುವ ಬೈಗುಳಗಳು**

ಬೈಗುಳ ಎಂದಾಕ್ಷಣ ಅದು ಕೆಟ್ಟದಲ್ಲ. ನಮ್ಮ ಭಾಷೆಯ ಶಬ್ದಕೋಶದ ಒಂದು ಭಾಗವನ್ನು ತುಂಬುವಂತಹದು. ಇದು ಜಾನಪದದಲ್ಲಿ ಪ್ರಧಾನ ಪಾತ್ರ ವಹಿಸುತ್ತದೆ. ಜನ ಭಾಷೆಯಲ್ಲಿ ಬೈಗುಳ ಹೆಚ್ಚಾಗಿ ನಗರಕ್ಕಿಂತ ಹಳ್ಳಿ ಅಕ್ಷರಸ್ಥರು, ಅನಕ್ಷರಸ್ಥರ ಬಾಯಿಯಲ್ಲಿ ಬೈಗುಳ ಬಳಕೆ ನಾವು ಕಾಣಬಹುದು. ಬೈಗುಳ ದುರ್ವಚನ, ದುರುಕ್ತಿ, ಕೆಟ್ಟ ಮಾತು, ಕಡೆನುಡಿ, ನಿಷ್ಠುರನುಡಿ ಮೊದಲಾದ ಅರ್ಥವಿದೆ. ಭಾಷೆಯ ದೃಷ್ಟಿಯಿಂದ ಬೈಗುಳಗಳಿಗೆ ಒಂದು ನಿರ್ದಿಷ್ಟ ಮಹತ್ವ ಸ್ಥಾನವಿದೆ.

ಗಾದೆಯಿಂದ ನಮ್ಮ ಮಾತಿಗೆ ಅಲಂಕಾರ ಬರುತ್ತದೆ. ಸೌಂದರ್ಯ ಬರುವ ಹಾಗೇ ಬೈಗುಳಗಳಿಂದ ಮಾತಿನ ಸೌಂದರ್ಯ ಹೆಚ್ಚುತ್ತದೆ. ಇಂತಹ ಬೈಗುಳಗಳು ಜನಪದ ಸಾಹಿತ್ಯದ ಒಂದು ಪ್ರಾಕರ ಎಂದು ಕರೆಯಬಹುದು. ಗಾದೆ, ಒಗಟು, ಬೈಗುಳಗಳು ಅಡಕವಾಗಿ ಭಾವ, ಸಂಸ್ಕೃತಿ ಅರ್ಥಮಾಡಿಕೊಳ್ಳುವ ವಾಹಕ, ಭಾವ ವಾಹಕ, ಸಂಸ್ಕೃತಿ ಅನುಭವ, ಜ್ಞಾನಮಟ್ಟ ವ್ಯಕ್ತಿಯಿಂದ ವ್ಯಕ್ತಿಗೆ ಕಾಲದಿಂದ ಕಾಲಕ್ಕೆ ಸಾಗಿಸುತ್ತದೆ. ಬೈಗುಳ ಕರ್ತೃ ಅನಕ್ಷರಸ್ಥ ಗ್ರಾಮೀಣ ಪ್ರದೇಶವನ್ನು ಜಾನಪದರು ಒಂದು ರೀತಿ ವರ್ಗ ಎಷ್ಟು ರೀತಿಯ ಪದಗಳು ಶಕ್ತಿಯುತವಾಗಿ ಪ್ರಭಾವಯುತವಾದ ಪದಗಳೆ ಬೈಗುಳಗಳು.

ಬೈಗುಳ ಒಂದು ರೀತಿಯ ಪೆಟ್ರೋಲಿಯಂ ಇದ್ದ ಹಾಗೆ. ಇದು ಶುದ್ಧೀಕರಿಸಲು ಯಂತ್ರ ಚಾಲನೆ ಮಾಡಲು, ಸುಡುವುದಕ್ಕೂ ತೀವ್ರ ಪ್ರಭಾವಿಯಾಗಿದೆ. ಭಾಷೆಯಲ್ಲಿರುವ ಬೈಗುಳಗಳಿಗೆ ಅಂತಹ ಶಕ್ತಿಯಿದೆ. 'ನಗುತ ಹೇಳುವವಾ ಹಾಳಾಗಲೂ ಹೇಳುವ, ಬೈದು ಹೇಳುವವನು ಬದುಕಲೂ ಹೇಳುವವನು" ಬೈಗುಳ ಕತ್ತಿಯಿದ್ದ ಹಾಗೆ. ಕತ್ತಿ ತಿರುಗುವುದರಿಂದ ಅಪಾಯ ಹೆಚ್ಚು. "ಮಾತು ಆಡಿದರೆ ಹೋಯಿತು, ಮುತ್ತು ಹೊಡೆದರೆ ಹೋಯಿತು" ಬೈಗುಳ ಕಿಡಿನುಡಿ, ಸರ್ಪಚುಂಬನ, ಚೇಳು, ಬೈಗುಳ ಪ್ರಭಾವಕಾರಿಯಾಗಿರುವುದಿಲ್ಲ ಅದನ್ನು ಒಬ್ಬ ವ್ಯಕ್ತಿ ಬೈಯುತ್ತಿರುವುದನ್ನು ಗಾಳಿಯ ಜೊತೆ ಮಾತನಾಡುತ್ತಿದ್ದಾನೆ ಎಂದು ತಿಳಿದರೆ ಪರಿಣಾಮಕಾರಿಯಾಗುವುದಿಲ್ಲ.

ಪರಸ್ಪರ ಇಬ್ಬರು ವ್ಯಕ್ತಿಗಳ ನಡುವೆ ಬೈಗುಳ ಹೆಚ್ಚಾಗಿ ಭಾವನೆಗಳು ಉತ್ಕೃಷ್ಟ ಸ್ಥಿತಿಗೆ ಏರುತ್ತದೆ. ಬೈಗುಳಗಳು ತೀವ್ರತೆ ಬರುವುದಕ್ಕೆ ಕೇಳಿಸಿಕೊಳ್ಳುವವರು ಮತ್ತೊಬ್ಬ ಇರಬೇಕು. ಇನ್ನೊಬ್ಬ ಇಲ್ಲದಿದ್ದರೆ ಬೈಗುಳ ವ್ಯರ್ಥ.

ಈ ಬೈಗುಳಗಳು ಹುಟ್ಟುವ ನೆಲೆ ಕಾಮ ಸಂಬಂಧಿಯಾಗಿ ಹುಟ್ಟಿಕೊಳ್ಳುತ್ತವೆ. ನಮ್ಮ ಸಂಸ್ಕೃತಿಯಲ್ಲಿ ಕಾಮ ಎಂಬುದು ನಿಷೇಧವಾದುದು. ಗೌಪ್ತವಾಗಿ ಪುರಸ್ಕೃತ ಸಾಮಾಜಿಕ ನಿಷೇಧ. ನಮ್ಮ ಬದುಕಿನಲ್ಲಿ ಪವಿತ್ರವಾದದ್ದು ಕುರಿತು ಚೇಳಿಸುವಾಗ ಆ ವ್ಯಕ್ತಿ ಮನಸ್ಸು ಮುಟ್ಟಲು ಈ ಬೈಗುಳ ಸಾಧ್ಯವಾಗುತ್ತಿದೆ. ಬೈಗುಳ ಅನೈತಿಕ ಸಂಬಂಧ, ಅನೈತಿಕ ಜನನಕ್ಕೆ ಸಂಬಂಧಿಸಿದ್ದಾಗಿರುತ್ತದೆ.

ಬೈಗುಳ ಮೂಲ ಹೆಣ್ಣನ್ನೆ ಗುರಿಯಾಗಿ ಇಟ್ಟುಕೊಂಡು ಮಾತನಾಡುವುದು ಕಮಡುಬರುತ್ತದೆ. ಹೆಣ್ಣಿನ ಪಾವಿತ್ರ್ಯತೆಯನ್ನು ಇಟ್ಟುಕೊಂಡು ಮಾತನಾಡಿದ ಆ ಬೈಗುಳ ತೀವ್ರವಾಗುತ್ತದೆ. ಸಾಮಾನ್ಯ ಜನರಿಗೆ ಇರಲಿ ಶಿಷ್ಟ ದೇವತೆಗಳಿಗೆ ಬೈಗುಳವಿಲ್ಲ. ಶೂದ್ರ ಮಾರಿ ದೇವತೆಗಳಿಗೆ ಪೂಜೆ ಮಾಡುವಾಗ ಬೈಗುಳವನ್ನು ಬಳಸುತ್ತಾರೆ. ಈ ಬೈಗುಳಗಳು ವ್ಯಕ್ತಿಯ ಸ್ವಾಭಿಮಾನಕ್ಕೆ, ಅಹಂಕಾರಕ್ಕೆ ನೇರವಾಗಿ ಬೈಗುಳ ಪರಿಣಾಮಕಾರಿಯಾಗುತ್ತದೆ. ಬೈಗುಳ ಎರಡು ಮುಖವನ್ನು ಕಾಣಬಹುದು. ಒಂದು ಸ್ನೇಹದಲ್ಲಿ ಮತ್ತೊಂದು ದ್ವೇಷದಲ್ಲಿ ನಮ್ಮ ಗ್ರಾಮದಲ್ಲಿ ಹೆಚ್ಚಾಗಿ ಕಂಡುಬರುವುದು ದ್ವೇಷದಲ್ಲಿ.

ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿ ಕಂಡುಬರುವ ಕೆಲವು ಬೈಗುಳ ಸಂದರ್ಭೋಚಿತವಾಗಿ ಮೂಡಿಬಂದಿದೆ. 'ಕರಿಮಣ್ಣಿನ ಗೊಂಬೆಗಳು' ಸೂಳೆಮಗ್ನೆ ಎಲ್ಲದೋ ಗೊಂಬೆ! ಬಾ ನಾನ್ ಕಿತ್ಕೊಡ್ತೀನಿ ನಿನ್ನ ಗೊಂಬೆಯಾ" ಎಂದು ಬೈಯ್ಯುವುದು ಎಷ್ಟು ಅಗೆದರು ಗೊಂಬೆ ಸಿಗದಿದ್ದಾಗ ಮತ್ತು ಅಲ್ಲಿ ಗೊಂಬೆಯಿಲ್ಲದೆ ಇರುವುದು ಪೂಜಾರಯ್ಯ ಮಾಡಿದ ಮೋಸ ಅರಿತು. ಅವನ ತಪ್ಪನ್ನು ಸರಿಪಡಿಸಲು ಈ ಪ್ರಯತ್ನ.

**'ಕಡಲಿಮಂತು'** ಎಂಬ ಕತೆಯಲ್ಲಿ ಬೈಗುಳ ಸುರಿಮಳೆಗೆದರಿದೆ. ಸವತಿಯರ ಮಾತಿನ ಚಕಮಕಿ ಈ ರೀತಿ ಮೂಡಿ ಬಂದಿದೆ. 'ಗಂಡಬಿಟ್ಟ ಲೌಡಿ! ತವರು ಮನೆಗೆ ಬಂದು ಸೇರ್ಕೊಂಡು ಅಲ್ಲಿ ಹಾದರತನ ಮಾಡ್ತಾ ಅವಳೆ' ಎಂದು ನಿಂದಿಸುವುದನ್ನು ಹಳ್ಳಿಯಲ್ಲಿ ಗಂಡನೊಂದಿಗೆ ಜಗಳವಾಡಿಕೊಂಡು ಅಪ್ಪನ ಮನೆಸೇರಿದ ಹೆಣ್ಣಿಗೆ ಸಲ್ಲುವ ಗೌರವ ಅಷ್ಟಕ್ಕಷ್ಟೇ ಅವಳು ಎಷ್ಟೇ ಸತ್ಯವಾಗಿದ್ದರೂ ಕೂಡ ಲೋಕ ನಿಂದನೆಗೆ ಒಳಗಾಗುತ್ತಾರೆ. ಅದರಿಂದಲೇ ಎಷ್ಟೇ ಕಷ್ಟ ಬಂದರೂ ಕೂಡ ತಾನು ಗಂಡನ ಮನೆಯಲ್ಲೇ ಇದ್ದು ಅಲ್ಲೇ ಸಾಯುತ್ತೇನೆ ಎಂಬ ಹೆಣ್ಣು ಮಕ್ಕಳು ಹೆಚ್ಚಾಗಿ ಕಂಡುಬರುತ್ತಾರೆ.

'ಹಲ್ಕಬಡ್ಡಿ, ಅವತ್ತು ಮದುವೆ ಇಲ್ಲದೆ ಗಂಡ್ಸ ನಿಂತಂಗೆ ನಿಂತಿದ್ದೆಲ್ಲೆ ಹೋಗ್ಲಿ ಅಂತ ನಾನು ನಿನ್ನ ಆವತ್ತು ಕೈಹಿಡಿದು ಉದ್ಧಾರ ಮಾಡಿದೆ, ನನಗೆ ಇವತ್ತು ತಿರುಗಿಸಿ ಹೊಡೆಯೋದಿಕ್ಕೆ ಬರ್‍ತೀಯಾ" ಈ ಬೈಗುಳದಿಂದಲೇ ಪೂರ್ಣ ವಿಚಾರ ತಿಳಿಯುತ್ತದೆ. ಬಡ ಕುಟುಂಬದಲ್ಲಿ ಹುಟ್ಟಿದ ತಿಮ್ಮಿಯನ್ನು ಒಳ್ಳೆಯ ವರನಿಗೆ ಮದುವೆ ಮಾಡುವುದು ಕಷ್ಟವಾಗಿತ್ತು ಅವರಿಂದಲೇ ಅವಳನ್ನು ಎರಡನೇ ಹೆಂಡತಿಯಾಗಿ ಮದುವೆ ಮಾಡಿಕೊಡದೆ ವಯಸ್ಸಾಗಿದ್ದರೂ ವರದಕ್ಷಿಣೆಯಲ್ಲಿದೆ ಹೆಣ್ಣು ಮಕ್ಕಳನ್ನು ಸಾಗಿಸುವುದು ಇದು ಸುಲಭ ಮಾರ್ಗವಾಗಿತ್ತು.

'ಕಟ್ಕೊಂಡೋನ ಜೊತೆ ನೀಗಿಸಲಾರದೆ ಓಡಿಹೋಗಿದ್ಲು ಇಟ್ಕೊಂಡ್ ಮಿಂಡ ಎಷ್ಟು ದಿನ ಅಂತ ನೋಡ್ಯಾನು? ನನ್ನ ಸವತಿ ಬಂದವಳೇ! ನನ್ನ ಬಾಳಿಗೆ ಮಾರಿಯಂಗೆ, ನನ್ನ ಹೊಟ್ಟೆ ಉರಿಸಾಕೆ ಸೂಳೆ!" ಗಂಡನನ್ನು ಬಿಟ್ಟು ಹೋದ ಹಿರಿಯ ಹೆಂಡತಿ ತನ್ನ ಗಂಡ ಮನೆಗೆ ಬಂದ ಸಂದರ್ಭದಲ್ಲಿ ಅಕೆ ಸವತಿ ಮತ್ತೆ ನನ್ನ ಸಂಸಾರದಲ್ಲಿ ಮುಳ್ಳು ಆಗುತ್ತಾಳೆ ಎಂದು ನಿಂದಿಸುವುದನ್ನು ಕಾಣಬಹುದು. ಚಿಕ್ಕ ಪುಟ್ಟ ವಿಚಾರಗಳಿಗೆ ಜಗಳ ಮಾಡಿಕೊಂಡು ಹೋಗಿ ತನ್ನ ಗಂಡನಿಗೆ ಮತ್ತೊಬ್ಬ ಹೆಂಡತಿ ಬಂದ ನಂತರ ಅವರಿಗೆ ತಿಳುವಳಿಕೆ ಮೂಡಿ ಗಂಡನ ಮನೆಗೆ ಬರುವಾಗ ಈ ಎಲ್ಲಾ ಅನಾಹುತಗಳು ಎದುರಾಗುತ್ತವೆ. ಅದಕ್ಕೆ ನಮ್ಮ ಹೆಣ್ಣು ಮಕ್ಕಳು ಯಾವುದೇ ನಿರ್ಧಾರ ತೆಗೆದುಕೊಳ್ಳುವ ಮೊದಲು ಯೋಚನೆಯನ್ನು ಮಾಡಬೇಕು. ದುಡುಕಿ ಮಾಡಿದ ತಪ್ಪಿಗಾಗಿ ನಾವು ಪಶ್ಚಾತ್ತಾಪ ಪಡಬೇಕಾಗುತ್ತದೆ.

ನನ್ನ ಸವತಿ ಹಲ್ಲಿಡಿದು ಮಾತಾಡೆ ಮೂವತ್ತೆರಡು ಹಲ್ಲೂ ಉದುರಿಸಿಬಿಟ್ಟೇನು ನೀನು ಕಣೆ, ಹಾದರಗಿತ್ತಿ! ಎಲ್ಲೋ ಬಿದ್ದಿದ್ದೋಳು; ಗಂಡ ಇಲ್ಲದೆ ನಿಂತಿದ್ದೋಳು–ನನ್ನ ಮುದಿಗಂಡನದೆ ರುಚಿಯಾಗಿದೆ ಅಂತ ಓಡಿ ಬಂದೊಳು ಜಗಳಕ್ಕೆ ನಿಂತ ಹೆಂಗಸು "ಸೇರಿಗೆ ಸವಾ ಸೇರು ಎಂಬಂತೆ ಯಾರು ಬೈಗುಳಗಳಲ್ಲಿ ಸೋಲುವುದಿಲ್ಲ. ಮನೆ ರಂಪ ಬೀದಿ ರಂಪ ಮಾಡುವವರೆವಿಗೂ ಅವರು ಬಿಡುವ ಜಾಯಮಾನವೇ ಅಲ್ಲ. ರಹಸ್ಯವಾಗಿ ಇಡಬೇಕಾದ ವಿಷಯಗಳು ಈ ಜಗಳದಲ್ಲಿ ಬೈಗುಳಗಳಾಗಿ ಹೊರಬರುತ್ತದೆ. ಬಡವನಿಗೆ ತನ್ನ ಸಂಸಾರ ಸರಿದೂಗಿಸಿಕೊಂಡು ಹೋಗುವುದೇ ಕಷ್ಟ ಅದರಲ್ಲಿ ಹೆಣ್ಣು ಮಕ್ಕಳ ಮದುವೆ ಮಾಡುವುದೆಂದರೆ ಅವನ ಕತೆಯೇ ಮುಗಿದಂತೆ. ಅಂತಹ ಸ್ಥಿತಿಯಲ್ಲಿ ಇರುವಾಗ ಯಾರೋ ಮುದುಕನು ನಿಮ್ಮ ಮಗಳನ್ನು ಮದುವೆಯಾಗುತ್ತೇನೆ, ವರದಕ್ಷಿಣೆ ಇಲ್ಲದೆ ಮದುವೆಯಾಗುತ್ತೇನೆ ಎಂದರೆ ಸಾಕು ಹಿಂದೆ ಮುಂದೆ ಯೋಚಿಸದೆ ತಮ್ಮ ಮಕ್ಕಳನ್ನು ಅವರಿಗೆ ಕೊಟ್ಟು ಮದುವೆ ಮಾಡುತ್ತಾರೆ. ನಂತರ ನಿಜಸ್ಥಿತಿ ತಿಳಿದಾಗ ಇದೆಲ್ಲಾ ಅನುಭವಿಸಬೇಕಾಗುತ್ತದೆ.

'ದನಿ' ಈ ಕತೆಯಲ್ಲಿ ಕಂಡುಬರುವ ಬೈಗುಳಗಳನ್ನು ಗಮನಿಸೋಣ. ಸಂಸಾರದ ಸಂಪೂರ್ಣ ಜವಾಬ್ದಾರಿಯನ್ನು ತೆಗೆದುಕೊಳ್ಳದೆ ದೇಶಾಂತರ ಹೋದ ಗಂಡನನ್ನು ಕುರಿತು ಬೈಯ್ಯುವ ಬೈಗುಳ "ನನ್ ಗಂಡ್ ಸೂಳೆ ಮಗ ಊರ್ನಲ್ಲಿ ಎಲ್ಲಾರಂಗೆ ಆಸ್ತಿ ಮಡಗಿದ್ರೆ, ಹಣ ಮಡಗಿದ್ರೆ ನನಗ್ಯಾಕೆ ಈ ಕಷ್ಟ ಬರ್ತಿತ್ತು?" ಈ ವಾಕ್ಯವನ್ನು ಗಮನಿಸಿದಾಗ ತನ್ನ ಗಂಡನಿಗೆ ಮರ್ಯಾದೆ ಕೊಡದೆ ಸೂಳೆ ಮಗನೆಂದು ಕರೆಯಬೇಕಾದರೆ ಅವಳು ಎಷ್ಟು ನೊಂದಿದ್ದಾಳೆ ಎಂಬುದನ್ನು ಮನನ ಮಾಡಿಕೊಳ್ಳಬೇಕು. ಯಾವುದೇ ಗಂಡು ತನ್ನ ಸಂಸಾರ ನಿಭಾಯಿಸಿಕೊಂಡು ಹೋದಾಗ ಆಕೆಯ ಕುಟುಂಬಕ್ಕೆ ಯಾವುದೇ ತೊಂದರೆಯಿರುವುದಿಲ್ಲ. ಆದರೆ ಹಳ್ಳಿಗಳಲ್ಲಿ ಒಂದಲ್ಲಾ ಒಂದು ಕಾರಣ ಸಂಸಾರ ಬಿಟ್ಟು ಹೋಗುವವರೇ ಹೆಚ್ಚಾಗಿ ಕಂಡುಬರುತ್ತಾರೆ. ಈ ಬೈಗುಳ ತನ್ನ ಮನದಾಳದ ನೋವನ್ನು ಹೊರಹಾಕುತ್ತದೆ. ಬೈಗುಳಗಳನ್ನು ಹೊರಹಾಕಿದಾಗ ಅವರಿಗೆ ಒಂದು ರೀತಿಯ ನೆಮ್ಮದಿ ಸಿಕ್ಕ ಹಾಗೆ ಆಗುತ್ತದೆ.

"ಥೂ, ನನ್ ಸವ್ತಿ ಹೊಟ್ಟೆಲುಟ್ಟೋಳೆ, ಇಸ್ಕೂಲ್‌ಗೋಗ್ ಬ್ಯಾಡ ಅಂತ ನಾನೇಳೋಗಿರ್ಲಿಲಾ?" ಪ್ರತಿಯೊಬ್ಬ ತಂದೆತಾಯಿಗೂ ನನ್ನ ಮಕ್ಕಳು ಓದಬೇಕು ದೊಡ್ಡ ವಿದ್ಯಾವಂತರಾಗಬೇಕೆಂಬ ಆಸೆಯನ್ನು ಹೊತ್ತುಕೊಂಡು ಜನ್ಮ ನೀಡುತ್ತಾರೆ. ಮಕ್ಕಳನ್ನು ಶಾಲೆಗೆ ಕಳುಹಿಸಿ ಆ ಮಕ್ಕಳನ್ನು ನೋಡಿ ಸಂತೊಷಗೊಂಡ ತಾಯಿ ತನ್ನ ಮಗಳನ್ನು ಶಾಲೆ ಬಿಡಿಸಿ ಮಕ್ಕಳನ್ನು ನೋಡಿಕೊಳ್ಳುವುದಕ್ಕೋಸ್ಕರ ಬಿಡಿಸಿದ್ದರು. ಅಲ್ಲಿಗೆ ಬಂದ ಉಪಾಧ್ಯಾಯರ ಮಕ್ಕಳ ಶಾಲೆಗೆ ಬರುವಂತೆ ಕರೆದುಕೊಂಡು ಅಲ್ಲಿ ದಂಡನೆಯನ್ನೇ ನೀಡಿದ ಸಂದರ್ಭದಲ್ಲಿ ಮಗಳನ್ನು ನೋಡಿ ಮನನೊಂದ ಆಕೆ ಅವರನ್ನು ಬೈಯ್ಯುತ್ತಾಳೆ.

'ಕೋಳಿಪಾಲು" ತನ್ನ ಕತೆಯಲ್ಲಿ ಬರುವ ಬೈಗುಳಗಳು ಸಣ್ಣದಾದ್ದರಿಂದ ಮೇವಾಕಿ ಚೆನ್ನಾಗಿ ಸಾಕಿದ್ದೆ, ಹದವಾಗಿತ್ತೇನೋ! ಯಾವೋಳೋ ಹಲ್ಲಿಗೆ ರಸ ಇಳಿಯೋವರೆಗೂ ಚೆನ್ನಾಗಿ ತಿಂದವಳೆ ನನಗೆ ಚೆನ್ನಾಗಿ ಗೊತ್ತು! ಯಾವೋಳು ನನ್ನ ಕೋಳಿ ಮುಕ್ಕಂಡವಳೆ ಅಂತ ಯಾವಳೂ .ರೊಟ್ಟಿ ಬುತ್ತಿ ಕಟ್ಕೊಂಡು ಐಗಂಚಿಯಿಂದ ಬಂದಿಲ್ಲ– ಲೇ! ಬಡ್ಡಿ ಹಿಡಿದು ಸಾಗಿಸಿ ಬಿಟ್ಟವಳೆ ಕಣಲೇ ಸಾಗಿಸಿರೆ ನಿನ್ನ ಮನೆಯಲ್ಲಿ ಇನ್ನೊಂದು ವಾರದಲ್ಲಿ ಹೆಣ ಬೀಳಾಂಗ ಮಾಡದೆ ಇದ್ದರೆ ನನ್ನ ಹೆಸರು ಹಿಡಿದು ನೀ ಕರೀಬೇಡ್ಲೆ" ಹಳ್ಳಿಯ ಹೆಂಗಸಿನ ಬಾಯಿಂದ ಬರುವ ಬೈಗುಳ ವೈಖರಿಯಂತೂ ಹೇಳತೀರದು ಅದನ್ನು ಕರೀಗೌಡರು ಚೆನ್ನಾಗಿ ಚಿತ್ರಿಸಿದ್ದಾರೆ ಎಂಬುದು ಮೇಲಿನ ವಾಕ್ಯವನ್ನು ಸ್ಪಷ್ಟವಾಗುತ್ತದೆ. ನಮ್ಮ ಜನರು ಸತ್ಯಾಸತ್ಯಗಳ ಬಗ್ಗೆ ಗಮನ ಹರಿಸುವುದಿಲ್ಲ. ತಾವು ಊಹಿಸಿಕೊಂಡಿದೆ ಸರಿಯೆಂದು ತಮಗೆ ಯಾರ ಮೇಲೆ ಅನುಮಾನವಿರುತ್ತದೆ.

ಅವರನ್ನು ಉದ್ದೇಶವಾಗಿ ಇಟ್ಟುಕೊಂಡು ಬೈಯ್ಯುವುದು ಸಹಜವಾಗಿ ಬೈಗುಳ ತಲೆಬುಡ ಇರುವುದಿಲ್ಲ ಮತ್ತೆ ಬೈಗುಳ ಸುರಿಮಳೆ.

"ನನ್ನ ಹೊಟ್ಟೆ ಉರಿಸಿದೆಯಲ್ಲೋ, ನಿನ್ನ ನಾಯಕಡಿಯಾ! ಅವತ್ತೇ ನನಗೆ ಹೇಳೋದಿಕೆ ನಿನಗೆ ಏನಾಗಿತ್ತೋ? ನಿನ್ನ ಬಾಯಿ ಸೇದೋಗಿತ್ತೇನೋ? ಎಂದು ಸತ್ಯ ಹೇಳಿದ ಮಗನನ್ನು ಬೈಯ್ಯುವ ರೀತಿ ನಿನಗೆ ನಾಯಿಕಡಿದರೂ ಪರೋಗಿಲ್ಲ ಎಂದು ತನ್ನ ಮಗನನ್ನು ನಿಂದಿಸಿದ್ದರು. ಪ್ರತ್ಯಕ್ಷವಾಗಿ ನೋಡಿದರು, ಪ್ರಮಾಣಿಸಿ ನೋಡು ಎಂಬ ನಾಣ್ನುಡಿಯಂತೆ ಯಾವುದೇ ಒಂದು ಆರೋಪವನ್ನು ಬೇರೆಯವರಿಗೆ ಹೋಲಿಸುವ ಮೊದಲು ತನ್ನಲ್ಲಿಯಿರುವ ತಪ್ಪುಗಳನ್ನು ಸರಿಪಡಿಸಿಕೊಂಡು ಕಳ್ಳರು ಮನೆಯ ಒಳಗೆ ಇರುತ್ತಾರೆಯೇ ಎಂದು ಪರೀಕ್ಷಿಸಬೇಕು.

**'ಉಗುಳು'** ಈ ಕತೆಯಲ್ಲಿ ಒಕ್ಕಲಿಗ ಮತ್ತು ಹೊಲಗೇರಿಯವರ ನಡುವೆ ಗೌಡ ಆಳುಗಳನ್ನು ಯಾವ ರೀತಿ ಕಾಣುತ್ತಾನೆ ಎಂಬುವುದು ತಿಳಿಯುತ್ತದೆ. ಗೌಡರು ಒರಟಾದ್ದರೂ ಅವರ ಹೆಂಡತಿ ಉದಾರತೆ ಎದ್ದುಕಾಣುತ್ತದೆ. "ಕಂಚಿ ಗೋಪುರನ ಹದ್ದು ಹೂತ್ಕೊಂಡೋದಂಗಾಡ್ತಿಯಲ್ಲ? ಸ್ವಲ್ಪ ಅದುಮ್ಕುಂಡು ಕುಂತ್ಕೊ" ಜೀತಾದಾಳನ್ನು ಯಾವಾಗಲೂ ಬೈಯುವುದು ದನದಂತೆ ದುಡಿಸಿಕೊಳ್ಳುವುದೇ ಗೌಡನ ಗುರಿ. ಮನೆಯು ಯಾವಾಗಲೂ ಸ್ವಚ್ಛತೆಯಿಂದ ಕೂಡಿರಬೇಕಾಗಿತ್ತು. ಸ್ವಲ್ಪ ಗಲೀಜು ಆಗಿದ್ದರೆ ಕೆಲಸದ ಹುಡುಗಿಯ ಗತಿ ಅಷ್ಟೇ. ಇದನ್ನು ಗಮನಿಸಿದ ಮನೆ ಆಳು ಯಂತ್ರದ ರೀತಿ ದುಡಿಯಬೇಕು ಎಂಬ ಹಂಬಲ. ಗೌಡನ ಬೈಗಳು ಸೊಂಟದ ಕೆಳಗಿನ ಭಾಷೆಯಲ್ಲಿ ಹರಾಜು ಹಾಕುತ್ತಾರೆ ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯವಾಗಿತ್ತು. ಅಲ್ಲಿನ ಗೌಡರು ಬಾಯಿ ತೆರೆದರೆ ನಾನ್‌ಸ್ಟಾಪ್‌ನಂತೆ ಬೈಯುವುದು ಅವರ ವೈಖರಿಯಾಗಿತ್ತು. ಆ ಗೌಡರ ತಮ್ಮ ಬೈಗುಳದಿಂದ ಹೊಲಗೇರಿಯು ನಡುಗುತ್ತಿತ್ತು. ಬೈಗುಳಗಳ ಸುರಿಮಳೆ 'ಅಜ್ಞಾತವಾಸಿ'ಯಲ್ಲಿ ಕಂಡುಬರುತ್ತದೆ. 'ಹೇಳು ಹೊಲೆ ಮುಂಡೆ, ಎಲ್ಲಿ ಅಡಗಿದ್ದಾನೆ ನಿನ್ನ ಗಂಡ? ಯಾಕೆ ಮಾತಾಡೋದಿಲ್ಲ ನೀನು? ಇನ್ನು ಎಷ್ಟು ಅಂತ ಹೊಡೆಸಿಕೊಳ್ಳುತ್ತಿ?"[೨]

'ಅವಮಾನ' ಪೋಲೀಸ್‌ರಿಂದ ಬರುವ ಬೈಗುಳ ವೈಖರಿ ಹಳ್ಳಿಯ ಹೆಂಗಸರಿನ ಬೈಗುಳಗಳಿಗಿಂತ ಹೊಲಸಾದ ಭಾಷೆ ಅವರ ಬಾಯಿಂದ ಹೊರಬರುವುದು. 'ನಡೆಯಲೇ ಸೂಳೆಮಗ್ನೆ ಒಳಕ್ಕೆ, ರಾತ್ರಿ ಬಾ ಅಂದ್ರೆ ನಮ್ಗೇ ಆಟ ಆಡಿಸ್ಬಿಟ್ಟಾ? ಸ್ಟೇಷನ್ನಿಗೆ ಬಾ ಅಂದ್ರೆ!" ಎನ್ನುತ್ತಾ ಪೇದೆ ಬಲವನ್ನೆಲ್ಲಾ ಬಿಟ್ಟು ತನ್ನ ಬಲಗಾಲಿನಿಂದ ರಾಜಣ್ಣನ ಸೊಂಟದ ಹಿಂಭಾಗದಲ್ಲಿ ದುಕ್ಕನೆ ಒದ್ದ. ಆತ ಒದ್ದ ರಭಸಕ್ಕೆ ಹೋಗಿ

೨. 'ಶತಮಾನದ ಸಣ್ಣಕಥೆ' – ಸಂಪಾದಕರು ಬೊಳುವಾರು ಮಹಮದ್ ಕುಂಞಿ ಪ್ರಕಾಶನ, ೨೦೦೧, ಪು. ೬೭

ಇನ್ಸ್‌ಪೆಕ್ಟರ್ ಕಾಲಿನ ಹತ್ತಿರ ಬಿದ್ದ. ಇಲ್ಲಿ ಒಂದೆ ತಾಯಿ ಹೊಟ್ಟೆಯಲ್ಲಿ ಹುಟ್ಟಿದ ಅಣ್ಣತಮ್ಮಂದಿರು ಹಣದ ವಿಷಯವಾಗಿ ಜಗಳವಾಡಿದಾಗ ಅವರಿಬ್ಬರ ಸ್ಟೇಷನ್‌ಗೆ ಹೋಗಿ ಅಣ್ಣತಮ್ಮಂದಿರು ವೈರಿಗಳಾಗಿ ಹೊಡೆದಾಡುವ ಪರಿಸ್ಥಿತಿ ಬಂದೊದಗುತ್ತದೆ.

"ಒಂದ್ಗುಟ್ಟಾದ ಅಣ್ಣನಿಗೆ ಮೋಸ ಮಾಡಿದ್ದೀಯಾ ಲೌಡಿ ಮಗ್ನೇ" ಮಕ್ಕಳು ಮಾಡಿದ ತಪ್ಪಿನಿಂದಾಗಿ ತನ್ನ ತಾಯಿ ಸೂಳೆ ಮಾಡುವಂತೆ ಮಕ್ಕಳು ತಾಯಿ ಮರ್ಯಾದೆ ಬೀದಿಗೆ ತಂದು ಇಟ್ಟರು. ಹಳ್ಳಿಗಳನ್ನು ಬಾಂಧವ್ಯಕ್ಕೆ ನಿಜವಾದ ಮಹತ್ವವಿದೆ. ಆದರೆ ಒಂದೂ ಎರಡು ಕುಟುಂಬಗಳು ತಮ್ಮ ಸಮಸ್ಯೆಯನ್ನು ಸ್ಟೇಷನ್‌ವರೆಗೂ ತಂದು ತಮ್ಮ ಕುಟುಂಬದ ಗೌರವನ್ನು ಹಾಳುಮಾಡುವುದನ್ನು ನಾವು ಕಾಣಬಹುದು. ಜೊತೆಗೆ ತಮ್ಮ ಸೋದರರ ಬಗ್ಗೆ ವಾತ್ಸಲ್ಯ ಉಕ್ಕಿ ಮತ್ತೆ ಅವನಿಗೆ ಲಂಚಕೊಟ್ಟು ತನ್ನ ತಮ್ಮನನ್ನು ಬಿಡಿಸಿಕೊಳ್ಳುವುದು ಬಾಂಧವ್ಯಕ್ಕೆ ಬೆಲೆಯಿದೆ. ಅದು ಎಂದೆಂದೂ ಶಾಶ್ವತ ಎಂಬುವುದನ್ನು ತಿಳಿಸುತ್ತದೆ.

ಮನುಷ್ಯನಿಗೆ ಒಂದಲ್ಲಾ ಒಂದು ದೌರ್ಬಲ್ಯಗಳು ಇರುತ್ತವೆ. ಈ ದೌರ್ಬಲ್ಯಗಳು ಮನುಷ್ಯನನ್ನು ಯಾವ ರೀತಿ ಹಾಳುಮಾಡುತ್ತದೆ ಎಂಬುವುದನ್ನು ಕರೀಗೌಡ ಬೀಚನಹಳ್ಳಿಯವರ ಕತೆಗಳನ್ನು ಗಮನಿಸಿದಾಗ ತಿಳಿದುಬರುತ್ತದೆ. ಆ ವ್ಯಕ್ತಿಯಲ್ಲಿರುವ ದೌರ್ಬಲ್ಯಗಳನ್ನು ಬುದ್ಧ ಜೀವಿಗಳು ಉಪಯೋಗಿಸಿಕೊಮಡು ಅದರ ಸದುಪಯೋಗಪಡಿಸಿಕೊಳ್ಳುತ್ತಾರೆ. ಅವರಲ್ಲಿ ಇರುವ ದೌರ್ಬಲ್ಯ ಅವನಲ್ಲದೆ ಇಡೀ ಕುಟುಂಬವನ್ನು ಹಾಳುಮಾಡುತ್ತದೆ. ಈ ರೀತಿ ದೌರ್ಬಲ್ಯವುಳ್ಳ ವ್ಯಕ್ತಿಗಳು ಹಳ್ಳಿಗಳು ಹೆಚ್ಚಾಗಿ ಕಂಡುಬರುತ್ತಾರೆ. ಅದಕ್ಕೆ ಉದಾಹರಣೆಯಾಗಿರುವ ವ್ಯಕ್ತಿಗಳು ಬೀಚನ-ಹಳ್ಳಿಯವರ ಕತೆಗಳಲ್ಲಿ ಕಾಣಬಹುದು.

**'ಅವಮಾನ'** ಕತೆಯಲ್ಲಿ ಚಿನ್ನವ್ವನ ಗಂಡನ್ನು ಮಾಂಸಪ್ರಿಯನಾಗಿದ್ದ ವಾರಕ್ಕೊಂದು ದಿನವಾದರೂ ಅವರಿಗೆ ಮಾಂಸದೂಟ ಇದ್ದೇ ಇರಬೇಕಾಗಿತ್ತು. ಮದುವೆ, ನೆರವಿ, ಪ್ರಸ್ತ, ಹಬ್ಬ, ಹಿರೀಹಬ್ಬ, ಮಾರಿಹಬ್ಬ ಮುಂತಾದ ವಿಶೇಷ ದಿನಗಳ ಸಂದರ್ಭದಲ್ಲಿ ಯಾರಾದರೂ ಮಾಂಸಮಾಡಿದ್ದಾರೆ ಎಂದರೆ ಸಾಕು, ಯಾರು ಕಡೆಯಿಂದಲೋ ಅದಕ್ಕೆ ಒಂದು ಸಂಬಂಧವನ್ನು ಕಲ್ಪಿಸಿಕೊಂಡು, ವೈಯಕ್ತಿಕವಾಗಿ ಎಂತಹುದೇ ತುರ್ತಿನ ಕೆಲಸವಿದ್ದರೂ ಅದನ್ನು ಬಿಟ್ಟೋ ಮುಂದೂಡಿಯೋ, ಮಾಂಸದೂಟಕ್ಕೆ ತಪ್ಪದೇ ಹಾಜರಾಗುತ್ತಿದ್ದ ಕುರಿಸಿದ್ದೇಗೌಡರ ಖ್ಯಾತಿ ಸುತ್ತಳ್ಳಿಯಲ್ಲೆಲ್ಲಾ ಪ್ರಚಲಿತವಾಗಿತ್ತು. ಕುರಿಬಾಡು ಎಂದರೆ ಕರೆಯದೆ ಇದ್ದರೂ ಕೂಡ ಹೋಗುತ್ತಿದ್ದ.

**'ಕೋಳಿಪಾಲು'** ಎಂಬ ಕತೆಯಲ್ಲಿ ಕರಡಯ್ಯನ ಒಂದು ಚಟ ಎಂದರೆ ವಾರದಲ್ಲಿ ಎರಡು ಮೂರು ಬಾರಿಯಾದರೂ ತನ್ನ ನಾಲಿಗೆಯನ್ನು ಮಾಂಸದೂಟದಿಂದ ರುಚಿಮಾಡಿಕೊಳ್ಳುವ ತೆವಲು, ಅದಕ್ಕೆ ಸಂಬಂಧಿಸಿದಂತೆ ಒಂದು

ಕತೆಯು ಸಾಕ್ಷಿಯಾಗಿದೆ. ಆತನ ಮಾಂಸದ ಖಯಾಲಿ ಕಂಡು ಊರಿನ ವೀರಣ್ಣ ಆತನಿಗೆ ಬಾಡೂಟ ಉಣ್ಣಿಸಿ, ಉಣ್ಣಿಸಿ ಕೊನೆಗೆ ಕರಡಯ್ಯನ ಹೆಂಡತಿ ಗಂಗೆಯನ್ನೇ ಓಡಿಸಿಕೊಂಡು ಊರುಬಿಟ್ಟು ಹೊರಟುಹೋದನು. ಇದಕ್ಕೆ ಪೂರಕವೆಂಬಂತೆ ಬೆಸಗರಹಳ್ಳಿ ಮಾನ ಕತೆಯಲ್ಲಿ ಈ ರೀತಿ ಬಾಯಿ ಚಪಲಕ್ಕೆ ಗುರಿಯಾದವರನ್ನು ಕಾಣಬಹುದಾಗಿದೆ. "ರಾಗಿಮುದ್ದೆಯ ಜೊತೆಗೆ ಬಾಡಿನೆಸರು, ಹುಳ್ಳಿಮೊಳೆ ಕಟ್ಟಿದ ಉರಿದೆಸರು ಬಸ್ಸಾರು – ಇವುಗಳಲ್ಲಿ ಯಾವುದು ಚಂದ ಎಂದು ಲೆಕ್ಕಾಚಾರ ಹಾಕುತ್ತಿದ್ದಾಗ ಸುರೇಶನ ಮನಸ್ಸು ಸಂಪೂರ್ಣವಾಗಿ ಬಾಡಿನೆಸರಿನ ಕಡೆಯೇ ನಿಂತು ವಾದಿಸತೊಡಗಿತು".[೩] ಹೀಗೆ ಅವರು ಕಲಿತಿರುವ ದುಷ್ಚಟಗಳಿಂದ ತಮ್ಮ ಸರ್ವಸ್ವವನ್ನು ಕಳೆದುಕೊಂಡು ಸದಾಕಾಲ ಅನ್ಯರ ನಿಂದನೆಗೆ ಗುರಿಯಾಗುತ್ತಾರೆ.

ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುವ ಪದ್ಧತಿ ಎಂದರೆ 'ಕೂಡಿಕೆ'. ಈ ಪದ್ಧತಿಯಿಂದಾಗಿ ಅನುಕೂಲ ಅನಾನುಕೂಲ ಎರಡು ಆಗಿವೆ. ಕರೀಗೌಡ ಹೆಚ್ಚು ಕತೆಗಳಲ್ಲಿ ಈ ಪದ್ಧತಿ ಕಂಡುಬರುತ್ತದೆ. ಅಪ್ರಾಪ್ತ ವಯಸ್ಸಿನಲ್ಲಿ ಮದುವೆ ಮಾಡು- ವುದರಿಂದ, ಮುದುಕನಿಗೆ ವಿವಾಹ ಮಾಡಿದಾಗ, ಈ ಎಲ್ಲ ಕಾರಣದಿಂದಾಗಿ ಮುಂಡೇಯರಾಗಿ ತನ್ನ ತಾಯಿಯ ಮನೆಯಲ್ಲೇ ಇರುತ್ತಿದ್ದರು. ಇವರಿಗೆ ಮತ್ತೆ ವಿವಾಹಮಾಡುವ ಪದ್ಧತಿ.

**'ಸಂಗಾತಿಗಳು'** – ಈ ಕತೆಯಲ್ಲಿ ನಂಜವ್ವ ಗಂಡನನ್ನು ಕಳೆದುಕೊಂಡು ಮುಂಡೇಯಾಗಿ ತನ್ನ ತಾಯಿಯ ಮನೆಯಲ್ಲಿದ್ದಾಗ, ಇತ್ತ ಚೆನ್ನಯ್ಯನಿಗೆ ಯಾರು ಹೆಣ್ಣು ಕೊಡದ ಸಂದರ್ಭದಲ್ಲಿ ಈ ವಿಧವೆಯನ್ನು ಮದುವೆ ಮಾಡಿಕೊಮಡು ಮರುಜೀವನ ಕೊಟ್ಟಿರುವುದು ಮೆಚ್ಚುವಂತಹದು. ಈ ಪದ್ಧತಿಯಿಂದ ಜೀವನಪರ್ಯಂತ ಬೇರೆಯವರಿಗಾಗಿ ದುಡಿಯಬೇಕಿದ್ದ ಒಂದು ಹೆಣ್ಣಿಗೆ ಹೊಸಜೀವನ ಕೊಟ್ಟು ಬದುಕಲು ದಾರಿ ತೋರಿಕೊಟ್ಟು ಉದಾರಿಗಳು ಇದ್ದಾರೆ.

ವಿಧವೆ ಮದುವೆಯಾದರು ಆಕೆ ಒಳ್ಳೆಯ ಗುಣಗಳ ಬಗ್ಗೆ ವರ್ಣಿಸುವುದು ಮೈರೋಮಾಂಚನಗೊಳ್ಳುತ್ತದೆ. "ಇವ್ವು ನನ್ನ ಹೆಂಡತಿ ಅಲ್ಲ ಬಿಡಿ! ಇವ್ವು ನನ್ ಭಾಗಕ್ಕೆ ನನ್ನ ಮನೆ ದೇವ್ರು ಕಣ! ಬಡವ್ರು ಅಂತ ನನ್ಗೆ ಯಾರು ಹೆಣ್ ಕೊಡ್ದೆ ಇದ್ದ ಕಾಲದಲ್ಲಿ ಇವ್ವು ನನ್ ಮನೆಗೆ ಭಾಗ್ಯ ಬಂದಂಗ್ ಬಂದ್ಲು. ಜನ ಮುಂಡೆ ಮದ್ವೆ ಆಗ್ತಾನೆ ಅಂತ ಆಡ್ಕೊಂಡ್ರೂನು ನಾನು ಲೆಕ್ಕಕ್ಕಿಟ್ಕೊಕ್ಕಳ್ದೆ ಕೂಡಿಕೆ ಆದೆ! ಬಂದ್ ಕಷ್ಟ ಸುಖವನೆಲ್ಲಾ ಹೊಟ್ಟೆಗಾಕ್‌ಕೊಂಡು ಇವತ್ತು ಈ ಊರ್ನಲ್ಲಿ ನನ್ನೊಬ್ಬ್ನ ಮನುಷ್ಯನ್ ಮಾಡಿದ್ಲು..." ಎಂದು ಚೆನ್ನಯ್ಯ ಹೆಂಡ್ತಿಯ ಹೃದಯಶೀಲತೆಯನ್ನು ಕೊಂಡಾಡಿದನು. ಇಲ್ಲಿ

೩. ಡಾ. ಕರೀಗೌಡ ಬೀಚನಹಳ್ಳಿ ಪ್ರಕಾಶನ, '೧೯೯೮ ಸಣ್ಣಕಥೆ', ೧೯೯೯, ಪು. ೫

ಚನ್ನಯ್ಯನ ವ್ಯಕ್ತಿತ್ವ ಎಂತಹವರನ್ನು ಬೆರಗುಗೊಳಿಸುತ್ತದೆ. ಹೆಣ್ಣನ್ನು ಅಲೆಗಳಿಯುವ ಕಾಲದಲ್ಲಿ, ಒಂದು ಹೆಣ್ಣಿಗೆ ಗೌರವವನ್ನು ಕೊಟ್ಟು ಅವಳ ಉದಾರ ಗುಣವನ್ನು ಕೊಂಡಾಡುವುದು ಅಚ್ಚರಿ ಮೂಡಿಸುವಂತಹದು.

ಇಲ್ಲಿ ಚೆನ್ನಯ್ಯ ಮತ್ತು ನಂಜವ್ವನ ಹೊಂದಾಣಿಕೆಯ ಭಾವನೆ ಸಂಸಾರವನ್ನು ಬಳ್ಳಿಯಂತೆ ಎಣೆಯುತ್ತಾ ಕೊಂಡೊಯ್ಯುತ್ತದೆ. ಯಾರದೆ ಸರಿಯಾಗಿರಲಿ ತಪ್ಪಾಗಿರಲಿ ಅದನ್ನು ಸರಿದೂಗಿಸಿಕೊಂಡು ಹೋಗುವ ಒಂದು ಜೀವನ ವಿಧಾನ ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿ ಒಬ್ಬರನ್ನು ಮತ್ತೊಬ್ಬರು ನಿಂದಿಸುತ್ತ ತಮ್ಮ ಸಂಸಾರ ಸುಖವನ್ನು ಕಳೆದುಕೊಳ್ಳದೆ ಸುಖಸಂಸಾರವನ್ನು ರೂಪಿಸಿಕೊಳ್ಳುವುದು ಗಂಡ-ಹೆಂಡತಿಯರ ಕರ್ತವ್ಯ ಎಂಬುದು ಈ ಕತೆಯಿಂದ ತಿಳಿಯುತ್ತದೆ.

'ಹಂದಿಲಕ್ಕವ' ಸಂಸಾರದಲ್ಲಿ ಸಾಮಾನ್ಯ ಕಾಣುವುದು ಅತ್ತೆ ಸೊಸೆಯ ಹೊಂದಾಣಿಕೆ ಇಲ್ಲದೆ ಇರುವುದು. ಬೆಳಿಗ್ಗೆ ಎನ್ನದೆ ಜಗಳವಾಡುತ್ತಾ ತಮ್ಮ ಕುಟುಂಬದ ನೆಮ್ಮದಿಯನ್ನು ಹಾಳುಮಾಡುವ ಮಂದಿ ಅನೇಕರಿದ್ದಾರೆ. ಅದಕ್ಕೆ ಸಾಕ್ಷಿ ಎಂಬಂತೆ ಇಲ್ಲಿ ಕಾಡಣ್ಣ ಗಂಗಮ್ಮನನ್ನು ಮದುವೆ ಮಾಡಿಕೊಂಡಾಗ ಅತ್ತೆಸೊಸೆಯರ ನಡುವೆ ಹೊಂದಾಣಿಕೆ ಇಲ್ಲದೆ ಅಮ್ಮನ ಮನೆಯನ್ನು ಸೇರಿಕೊಂಡಿದ್ದು. ಗಂಡ ಸತ್ತ ವಿಧವೆಯಾದ ಗೌರಮ್ಮನನ್ನು ಮರುಮದುವೆ ಮಾಡಿಸಿದ್ದು ಇಲ್ಲಿ ಕಾಣಬಹುದು.

ಒಂದು ಸಂಸಾರ ಸರಾಗವಾಗಿ ನಡೆಯಲು ಮನೆಯ ಹೊಂದಾಣಿಕೆ ಬಹಳ ಮುಖ್ಯ. ಅವರಲ್ಲಿ ಹೊಂದಾಣಿಕೆ ಇಲ್ಲದೆ ಇದ್ದರೆ ಮನೆಯಲ್ಲಿ ದಿನಾಲೂ ಕುರುಕ್ಷೇತ್ರ. ಹೊಂದಿಕೊಂಡು ಹೋಗಲು ಸಾಧ್ಯವಾಗದ ಹೆಣ್ಣು ಮಗಳನ್ನು ಹೆಂಡತಿಯನ್ನು ಮನೆಗೆ ಕರೆಯುವ ಸಾವಧಾನ ಅತ್ತೆ ಮನೆಯವರಿಗೆ ಇರುವುದಿಲ್ಲ. ಅವರು ಮಾಡುವುದಿಲ್ಲ. ಈ ವ್ಯವಸ್ಥೆಯಿಂದಾಗಿ ಎರಡು ಕುಟುಂಬಗಳು ಹಾಳಾಗುವುದರ ಜೊತೆಗೆ ಎರಡು ಜೀವಗಳನ್ನು ಬೇರ್ಪಡಿಸುತ್ತಾರೆ. ಈ ಮೂಢ ಜನರಿಗೆ ತಮ್ಮ ತಪ್ಪಿನ ಬಗ್ಗೆ ಅರಿವು ಮೂಡುವವರೆಗೂ ಏನು ಮಾಡಲು ಸಾಧ್ಯವಿಲ್ಲ.

ಹೆಂಡತಿ ಬೇರೆಯಾದ ಮರುಕ್ಷಣದಲ್ಲಿ ಮತ್ತೊಂದು ವಿವಾಹ ಗೌರಮ್ಮನೊಂದಿಗೆ ಆಯಿತು. ಗೌರಮ್ಮನ ಹಿರಿಯ ಗಂಡನೇ ಹಾವು ಕಚ್ಚಿ ಸತ್ತಾಗ ಅವನೊಂದಿಗೆ ಕೂಡಿಕೆ ಮಾಡಿಕೊಂಡರು. ಕಿರಿಯ ಹೆಂಡತಿ ಮನೆಗೆ ಬಂದಾಗ ಸವತಿ ಮತ್ಸರ ಶುರುವಾಗುತ್ತದೆ. ತನ್ನ ಜೀವನ ಹಾಳು ಮಾಡಿಕೊಳುವುದರ ಜೊತೆಗೆ ಮೊದಲೇ ನೊಂದಿರುವ ಹೆಣ್ಣಿಗೆ ಮತ್ತೆ ನೋವನ್ನು ಕೊಡುವುದನ್ನು ಕಾಣಬಹುದು.

ಹೀಗೆ ಇಬ್ಬರೂ ಪರಸ್ಪರ ಬೈದಾಡಿದರೂ ಈ ನಡುವೆ ಕಾಡಣ್ಣ ಗಂಗಮ್ಮನ ಮನೆಗೂ ಹೋಗಿ ಬರುತ್ತಿದ್ದ ಇದರಿಂದ ಇಬ್ಬರಿಗೂ ಒಟ್ಟೊಟ್ಟಿಗೇ ಮಕ್ಕಳು ಆಗುವುದಕ್ಕೆ

ಶುರುವಾಗಿತ್ತು. ಮಕ್ಕಳು ಸಲೀಸಾಗಿ ತನ್ನ ದೊಡ್ಡವ್ವ ಮನೆಗೆ ಹೋಗುತ್ತಿದ್ದನು. ಮಗುವಿಗೆ ಚಾಡಿ ಹೇಳುತ್ತಿದ್ದು 'ಅವಳು ಮೋಸಗಾತಿ" ಊಟದಲ್ಲಿ ಕೈಮಸ್ಕೆ ಹಾಕಿಬಿಡ್ತಾಳೆ ಅದ ಹಕದೆ ಇದ್ರೆ ಅವಳ ವಂಸ ಉದ್ಧಾರವೇ ಆಗೋದಿಲ್ಲ ಅದಕ್ಕೆ ನೀನು ಅಲ್ಲಿಗೆ ಹೋಗಬೇಡ. ಅವಳು ಏನಾದ್ರೂ ಕೊಟ್ರೆ ಅಪ್ಪಿತಪ್ಪಿಯಾ ತಿನ್ನಬೇಡ ಎಂದು ಅಜ್ಜಿ ಕೃಷ್ಣನಿಗೆ ಹೇಳಿ ಕಾಯಿಲೆ ಬಗ್ಗೆ ಎಚ್ಚರಿಸುತ್ತಿದ್ದಳು. ಆದರೆ ಕೃಷ್ಣ ಮಾತ್ರ ಅಜ್ಜಿ ಕಣ್ಣು ತಪ್ಪಿಸಿ ಹೋಗಿಬಿಡುತ್ತಿದ್ದ. ಕೃಷ್ಣನಿಗೆ ತನ್ನ ದೊಡ್ಡವ್ವ ಅಜ್ಜಿ ಹೇಳಿದವಳ ಥರ ಅಲ್ಲ ಅಂತ ಅನ್ನಿಸುತ್ತಿತ್ತು.

ಗ್ರಾಮಾಂತರ ಮಕ್ಕಳು ತನ್ನ ತಂದೆತಾಯಿಯ ಮಾತನ್ನು ಎಂದು ತೆಗೆದುಹಾಕುತ್ತಿರಲಿಲ್ಲ. ಹಿರಿಯರ ಹಠ, ತಗ್ಗಿ ಬಗ್ಗದ ಸೊಸೆಯಿಂದಾಗಿ ಗಂಡು ಹೆಣ್ಣು ಬೇರೆಯಾಗಬೇಕಾಯಿತು. ಮತ್ತೊಬ್ಬಳನ್ನು ಮದುವೆ ಮಾಡಿಕೊಂಡು ಸ್ವಲ್ಪ ದಿನವಾದ ಮೇಲೆ ಮೊದಲ ಹೆಂಡತಿ ಪಾದವೇ ಗತಿ ಎಂಬಂತೆ ಅವಳ ಮನೆಗೆ ಬಂದು ಹೋಗಿ ಮಾಡುವ ಕಾರ್ಯವನ್ನು ಶುರುಮಾಡಿಕೊಳುವುದನ್ನು ನಾವು ಕಾಣಬಹುದಾಗಿದೆ. ಇದು ಇಷ್ಟಾದರೆ ಪರವಾಗಿಲ್ಲ. ಹಿರಿಯ ಹೆಂಡತಿ ಕಿರಿಯ ಹೆಂಡತಿ ಎಂದು ಮಕ್ಕಳ ಮುಗ್ಧ ಮನಸ್ಸಿನಲ್ಲಿ ಇಲ್ಲಸಲ್ಲದ ವಿಚಾರಗಳಿಂದ ತಲೆ ತುಂಬಿ ಅವರ ಮನಸ್ಸನ್ನು ಕಲಕುವ ಕೆಲಸಗಳು ನಡೆಸುವುದನ್ನು ಕಾಣಬಹುದಾಗಿದೆ. ಹಿರಿಯವರಾದ ಇವರುಗಳೇ ನಿರ್ಮಲ ಮನಸ್ಸು ಕಲುಷಿತಗೊಳಿಸುವುದು ಮಹಾ ಅಪರಾಧವೆಂದರೆ ತಪ್ಪಾಗಲಾರದು.

ಆದರೆ ಮುಗ್ಧ ಮನಸ್ಸಿನ ಮಕ್ಕಳು ದೇವರ ಸಮ ಎಂಬಂತೆ ತಮ್ಮ ಭಾವಕ್ಕೆ ಬಂದ ಹಾಗೇ ನಡೆದುಕೊಳ್ಳುತ್ತಾರೆ. ಯಾರ ಬಗ್ಗೆಯೂ ದ್ವೇಷ ಸಾಧಿಸಲು ಹೋಗದೆ ಎಲ್ಲರನ್ನು ಒಳ್ಳೆಯ ರೀತಿಯಲ್ಲಿ ಕಾಣುತ್ತಾರೆ. ಅವರು ಶತ್ರುಗಳಾದರೂ ಕೂಡ ಅವರೊಂದಿಗೆ ಮಾತೃತ್ವ ಭಾವನೆ ಬೆಳೆಸಿಕೊಳ್ಳವುದನ್ನು ನಾವು ಕಾಣಬಹುದು. ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳದ ಯಜಮಾನ ಜಾಣ ಕಿವುಡನ್ನು ತೋರುತ್ತಾನೆ. ನಮ್ಮ ನಾರಿಯರ ಇಚ್ಛೆ ಏನೆಂದರೆ ತನ್ನ ಗಂಡನನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳಬೇಕು. ಇಬ್ಬರ ಹೆಂಡಿತಿಯ ನಡುವೆ ಸಹಬಾಳ್ವೆ ಸಾಧ್ಯವಿಲ್ಲ ಎಂದು ನಂಬಿದ್ದರು.

ಈ ಕತೆಯಲ್ಲಿ ಇಬ್ಬರು ಹೆಂಡತಿಯ ಗುಣಗಳಲ್ಲಿ ಅಸದೃಶ್ಯವನ್ನು ನಾವು ಕಾಣಬಹುದು. ಹಿರಿಯ ಹೆಂಡತಿ ವಯಸ್ಸಿನಲ್ಲಿ, ಅನುಭವದಲ್ಲಿ ದೊಡ್ಡವಳಾದ್ದರಿಂದ ಅವಳ ಆಲೋಚನೆ ಈ ರೀತಿ ಇತ್ತು. ಗಂಗಮ್ಮ ತನ್ನ ಮತ್ತು ಸವತಿಯ ಮಗನನ್ನು ಒಂದೇ ರೀತಿ ಕಾಣುತ್ತಿದ್ದಳು. ಆ ಮಕ್ಕಳಿಗೆ ಒಳ್ಳೆಯ ಮಾರ್ಗದಲ್ಲಿ ನಡೆಯಬೇಕು ಎಂಬುದಾಗಿ ಮಾರ್ಗದರ್ಶನ ನೀಡುತ್ತಾಳೆ. ಮಕ್ಕಳ ಎದುರು ಗೌರಮ್ಮನ ಬಗ್ಗೆ ಏನು ಮಾತನಾಡುತ್ತಿರಲಿಲ್ಲ ಹಿಂದೆಯು ಕೂಡ ಮಾತನಾಡುತ್ತಿರಲಿಲ್ಲ. ಈಕೆಗೆ ತನ್ನ ಗಂಡನ

ಬಗ್ಗೆ ಅಪಾರ ಗೌರವಿರುವುದನ್ನು ಕಾಣಬಹುದು. ನಮ್ಮ ಭಾರತೀಯರು ಪತಿಯೇ ಪರದೈವ ಎಂದು ನಂಬಿಕೊಂಡಿರುವುದನ್ನು ಗಂಡ ಹೆಂಡತಿಯ ಬಾಂಧವ್ಯಕ್ಕೆ ಬಹಳ ಮಹತ್ವವಿರುವುದು ಎಲ್ಲರೂ ಈ ಬಾಂಧವ್ಯಕ್ಕೆ ಮಾನ್ಯತೆ ಕೊಡುತ್ತಾರೆ.

ಇತ್ತೀಚಿನ ಯುವತಿಯರಲ್ಲಿ ಸ್ವಾರ್ಥ ಭಾವನೆ ಹೆಚ್ಚಾಗಿರುತ್ತದೆ. ನಮ್ಮ ಕುಟುಂಬದಲ್ಲಿ ನನ್ನ ಗಂಡ ಮಕ್ಕಳು ಬಿಟ್ಟರೆ ಬೇರೆ ಯಾರು ಇರಬಾರದು. ಬೇರೆಯವರು ಕೂಡ ನಮ್ಮ ಸಂಸಾರದಲ್ಲಿ ಪ್ರವೇಶ ಮಾಡಬಾರದು ಎಂಬ ಭಾವನೆ ತನ್ನ ಗಂಡನನ್ನು ದೈಹಿಕವಾಗಿ ಆಗಲಿ ಮಾನಸಿಕವಾಗಿ ಆಗಲಿ ಬೇರೆಯವರೊಂದಿಗೆ ಹಂಚಿಕೊಳ್ಳಲು ಇಷ್ಟಪಡುವುದಿಲ್ಲ. ಸವತಿಯ ನೆರಳು ಇವಳ ಮೇಲೆ ಬೀಳಬಾರದು. ಈ ರೀತಿ ಇಚ್ಛೆವುಳ್ಳವಳು. ಈ ಸಮಸ್ಯೆಗಳು ಕೂಡಿಕೆಯಿಂದ ಉಂಟಾಗಿ ಸಂಸಾರ ಸಂತೋಷವನ್ನೇ ಹಾಳು ಮಾಡುತ್ತದೆ.

ಸವತಿಯರ ಮತ್ಸರ ಎಲ್ಲಿಯವರೆಗೆ ಹೋಗುತ್ತದೆ ಎಂದರೆ ಇವಳು ಹಾಳಾಗುವಂತೆ ಅವಳು, ಅವಳು ಹಾಳಾಗುವಂತೆ ಇವಳು ದೇವರ ಬಳಿಗೆ ಹೋಗಿ ಹರಕೆ ಹೊತ್ತು ಬರುವುದು ಸಹಜವಾಗಿರುತ್ತದೆ. ಇವರು ಯಾರೊಬ್ಬರ ಏಳಿಗೆಯನ್ನು ಸಹಿಸದೆ ಮಂದಿ ಕೋಳಿ ಕುರಿ ಬಲಿ ಕೊಡಲು ತೊಡಗುತ್ತಾರೆ. ಬೇರೊಬ್ಬ ಅಸಹಾಯಕಳು ಇವರ ಮನೆಗೆ ಬಂದು ಸೇರಿದರೆ ಅವಳಿಗೂ ತನ್ನ ಗಂಡನಿಗೂ ಅನೈತಿಕ ಸಂಬಂಧವಿದೆ ಎಂದು ಭಾವಿಸಿ ಇಬ್ಬರೂ ಜೊತೆಯಲ್ಲಿ ದೇವರ ಬಳಿ ಹೋಗಿ ಹರಕೆ ಹೊರುವುದು ಏಕೆಂದರೆ ಅವಳು ತನ್ನ ಗಂಡನನ್ನು ಬಿಟ್ಟು ಹೋಗಲಿ ಎಂಬ ಭಾವನೆಯಿಂದ ಈ ರೀತಿ ಗುಣಗಳು ಹೆಚ್ಚಾಗಿ ಕಂಡುಬರುತ್ತವೆ.

ಇದನ್ನು ಗಮನಿಸುವುದು ಏನೆಂದರೆ ಕೆಲವೊಂದು ಕತೆಯಲ್ಲಿ ಗೌಡ ಎಂದರೆ ದಬ್ಬಾಳಿಕೆಯ ಸಂಕೇತವಾಗಿದೆ ಆದರೆ ಹಂದಿಲಕ್ಕವ್ವನ ವಿಷಯದಲ್ಲಿ ಅವನು ತನ್ನಲಿರುವ ಮಾನವೀಯ ಗುಣ ಮೆಚ್ಚುವಂತಹದ್ದು. ಆದರೆ ಹೆಣ್ಣು ಮಕ್ಕಳಲ್ಲಿ ಹುಟ್ಟುವಂತದು ಅನುಮಾನ ಇದು ಸಹಜಗುಣ. ಆಕೆಯ ಸಹಾಯ ಮಾಡಿದ್ದಾರೆ ಎಂಬ ಭಾವನೆಯ ಉಂಟಾಗುವುದಿಲ್ಲ. ಎಲ್ಲವನ್ನು ಅನುಮಾನ ದೃಷ್ಟಿಯಿಂದ ನೋಡುವ ಸಹಜ ಗುಣ 'ಕಾಮಾಲೆ ಕಣ್ಣಿಗೆ ಕಾಣುವುದೆಲ್ಲಾ ಹಳದಿ' ಎಂಬಂತೆ ಅವನಲ್ಲಿ ಇರುವ ಒಳ್ಳೆಯ ಗುಣವನ್ನು ಮೆಚ್ಚಿ ಪ್ರೋತ್ಸಾಹ ನೀಡಬೇಕು. ಹಳ್ಳಿಗರಲ್ಲಿ ಕಾಣುವಂತ ಗುಣ ಎಂದರೆ ಯಾರೇ ಅಸಹಾಕರಿದ್ದರು ಬೇಗ ಅವಳ ಕಷ್ಟಕ್ಕೆ ಸ್ಪಂದಿಸುತ್ತಾರೆ. ಈ ರೀತಿಯ ಸಹಾಯ ಮನೋಭಾವ ನಗರ ವಾಸಿಗಳಲ್ಲಿ ಕಂಡುಬರುವುದಿಲ್ಲ. ನಗರದಲ್ಲಿ ಪಕ್ಕದ ಮನೆಯಲ್ಲಿ ನಡೆಯುವ ಯಾವುದೇ ಘಟನೆಯೂ ನಮಗೆ ಸಂಬಂದಿಸಿದ್ದಲ್ಲ ಎಂಬಂತೆ ಇರುತ್ತಾರೆ. ಆದರೆ ಹಳ್ಳಿಯವರು ನೆರೆಯವರ ಕಷ್ಟ ನಮ್ಮ ಕಷ್ಟ ಎಂಬಂತೆ ಭಾವಿಸುತ್ತಾರೆ.

ಹಳ್ಳಿಗಾಡಿನ ಗಂಡಹೆಂಡಿರ ಬಾಂಧವ್ಯವನ್ನು ಗುಪ್ತವಾಗಿ ಇಟ್ಟುಕೊಂಡು ಆಳವಾಗಿ ಪ್ರೀತಿಸುತ್ತಾರೆ. ಈ ರೀತಿಯಾಗಿ ಅವರಲ್ಲಿ ಕಂಡುಬರುವ ಸಂವೇದನೆಯನ್ನು ವರ್ಣಿಸಲಾಗುವುದಿಲ್ಲ. ಜೊತೆಗೆ ಈ ಹಳ್ಳಿಗಾಡಿನ ಜನರ ಬೆಳಿಗ್ಗೆಯಿಂದ ಸಂಜೆಯ-ವರೆವಿಗೂ ದುಡಿಯುವ ಇವರಿಗೆ ತಮ್ಮ ಶ್ರಮ ಕಡಿಮೆ ಮಾಡಿಕೊಳ್ಳುವುದಕ್ಕಾಗಿ ಸಾರಾಯಿಯ ದಾಸರಾಗುವುದನ್ನು ಕಾಣಬಹುದು. ಈ ಕುಡಿತಕ್ಕೆ ಬಲಿಯಾದ ಮಂದಿ ಈ ಕುಡಿತದಿಂದ ಹೊರಬರಲು ಸಾಧ್ಯವಾಗದೆ ಅವರ ಸಂಸಾರವೇ ನಾಶವಾಗುವುದನ್ನು ಕಾಣಬಹುದಾಗಿದೆ.

ನಮ್ಮ ಹಳ್ಳಿಯ ಜನರು ನಗರ ಜೀವನಕ್ಕೆ ಮಾರುಹೋಗಿ ಹಳ್ಳಿಬಿಟ್ಟು ನಗರ ಸೇರಿದವರನ್ನು ಕಾಣಬಹುದಾಗಿದೆ. ಯಾವುದು ಒಂದು ಫ್ಯಾಕ್ಟರಿ ಸೇರಿ ಅದು ಲಾಕ್‌ಔಟ್ ಆದ ಮೇಲೆ ಕೂಲಿನಾಲಿ ಮಾಡಿಕೊಂಡು ಜೀವನ ಸಾಗಿಸುತ್ತಿರುವವರನ್ನು ಕಾಣಬಹುದಾಗಿದೆ. ಈ ತರಹದ ತೊಂದರೆಗೆ ಸಿಲುಕಿದರು ಅವರಲ್ಲಿ ಇರುವ ಆತ್ಮವಿಶ್ವಾಸ ಮೆಚ್ಚುವಂತಹದು ಹುಟ್ಟಿಸಿದ ಶಿವ ಹುಲ್ಲು ನೀರು ಕೊಡಲ್ವ ಎಂಬ ನಂಬಿಕೆಯಿಂದ ಜೀವನ ಸಾಗಿಸುತ್ತಾರೆ. ತಮ್ಮ ಶ್ರಮದ ಬಗ್ಗೆ ನಂಬಿಕೆಯಿಟ್ಟು ಕೊಂಡಿರುವ ಜನರನ್ನು ಕಾಣಬಹುದು. ಹಳ್ಳಿಗಳಲ್ಲಿ ಇರುವ ಜನರ ತಾಳ್ಮೆ ವಿನಯ, ನಂಬಿಕೆ ಪರೋಪಕಾರ, ಸಮಯಪ್ರಜ್ಞೆ, ಮೋಸ, ವಂಚನೆ ಹಳ್ಳಿಗಳಲ್ಲಿ ಹೆಚ್ಚಾಗಿ ಕಾಣುವುದಿಲ್ಲ.

ಡಾ.ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿ ಒಂದು ಹೆಣ್ಣು ಅಥವಾ ಒಂದು ಗಂಡು ಪರ ಹೆಣ್ಣು ಮಕ್ಕಳ ಅಥವಾ ಗಂಡು ಮಕ್ಕಳನ್ನು ಮೋಹಿಸಿ ಮದುವೆಯಾದರೆ ಅದು ಮಹಾ ಅಪರಾಧವೆಂಬಂತೆ ಕಾಣುತ್ತಾರೆ. ಆದರೆ ವ್ಯದೇಹಿ "ಸೌಗಂಧಿಯ ಸ್ವಗತಗಳು" ಎಂಬ ಕತೆಯಲ್ಲಿ ತನ್ನ ಮಗಳನ್ನು ಅಪರಿಚಿತನಾದ ಒಬ್ಬ ವ್ಯಕ್ತಿಯ ಜೊತೆ ತನ್ನ ಮಗಳ ಹೆಂಗಸಿನ ಜೊತೆ ಕೂರಿಸಿ ಒಂದು ಹುಡುಗಿಗೂ ಹೋಲಿಕೆ ಕೂಡುವುದನ್ನು ಕಾಣಬಹುದಾಗಿದೆ. ತಂದೆಯೇ ತನ್ನ ಮಗಳಿಗೆ ಪ್ರೇಮವಿವಾಹಕ್ಕೆ ಪ್ರಚೋದಿಸುವುದನ್ನು ಕಾಣಬಹುದಾಗಿದೆ. ಹೆಣ್ಣು ಮಗಳನ್ನು ಒಬ್ಬಳೆ ಸಿಟಿಯಲ್ಲಿ ಇರಿಸುವುದನ್ನು ಕಾಣಬಹುದು. ವೈದೇಹಿಯವರ ಕತೆಯಲ್ಲೂ ಹೆಂಡ್ತಿಗೆ ಮದುವೆ ಅನಿವಾರ್ಯ ಎನಿಸುತ್ತದೆ. ಒಟ್ಟಾಗಿ ಇವರ ಕಥಾವಸ್ತು ಒಂದು ಹೆಣ್ಣಿನ ಮನದಾಳದ ಒದ್ದಾಟವನ್ನು ಸಹೃದಯರ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಕರೀಗೌಡ ಕತೆಯಲ್ಲಿ ಬರುವ ಸೂಳೆ ತನ್ನ ಹತ್ತಿರ ಬರುವ ಮಂದಿಯ ಜೊತೆ ನ್ಯಾಯ ಒದಗಿಸಿ ಅವರನ್ನು ತೃಪ್ತಿಪಡಿಸುತ್ತಾಳೆ. ಆದರೆ ಅಲ್ಲಿನ ಜನರು ಮಾತ್ರ ಅವಳನ್ನು ನಿಷ್ಠುರವಾಗಿ ಕಾಣುತ್ತಾರೆ. ಆದರೆ ಇದಕ್ಕೆ ಭಿನ್ನವಿರುವಂತೆ ಕೊಡಗಿನ ಗೌರಮ್ಮನ 'ಮನುವಿನರಾಣಿ' ಈ ಕತೆಯಲ್ಲಿ ಅಮಾನವೀಯ ಗುಣವನ್ನು ಮರೆತು

ಅವಳಿಗೆ ಚಿಕಿತ್ಸೆ ನೀಡಿ ಮಾನವೀಯತೆ ಮೆರೆಯುವುದನ್ನು ಕಾಣುತ್ತೇವೆ. ಅಲ್ಲಿ ಆ ಡಾಕ್ಟರ್ ಬಗ್ಗೆ ಇದ್ದ ಭಾವನೆ ಸೋದರತ್ವ ಇದು ನಿಜವಾಗಲೂ ಮೆಚ್ಚುವಂತಹದ್ದು.

ದೊಡ್ಡ ಮಗಳು ಇರುವವಳನ್ನು ಮದುವೆ ಮಾಡಿಕೊಂಡು ಸಂಸಾರ ಸಾಗಿಸುತ್ತಿರುವಾಗಲೇ ತನ್ನ ಹಿರಿಯ ಗಂಡನ ಮಗಳನ್ನು ಮದುವೆ ಮಾಡಿದರು. ಆದರೆ ಇಲ್ಲಿ ಒಂದು ಸೋಜಿಗದ ಸಂಗತಿ ಎಂದರೆ ತಾಯಿ ಬಾಣಂತಿಯಾಗಿರುವಾಗ ಜೊತೆಗೆ ಮಗಳು ಕೂಡ ಬಾಣಂತಾನ ಮಾಡಿಸಿಕೊಳ್ಳುವುದಕ್ಕೆ ತಾಯಿಯ ಮನೆಗೆ ಬರುವುದನ್ನು ನಾವು ಕಾಣಬಹುದು. ಇದರಿಂದ ನಾಚಿಕೆಗೊಂಡು ಅಳಿಯ ಕತ್ತಲಾದ ಮೇಲೆ ಮಾವನ ಮನೆಗೆ ಬರಲು ಆರಂಭಿಸಿದನು. ಹೀಗಿರುವಾಗ ಅಲ್ಲಿ ಸಂತಾನ ತಡೆಯ ವ್ಯವಸ್ಥೆಗೆ ಗಿಡಮೂಲಿಕೆ ತೆಗೆದುಕೊಳ್ಳುತ್ತಿದ್ದರು. ಅದರಂತೆ ಹಿರಿಯಜ್ಜಿಯ ಬಳಿ ಹೋಗುತ್ತಿದ್ದಳು. ಆಕೆ ಕೊಟ್ಟ ಗಿಡಮೂಲಿಕೆಯನ್ನು ತೆಗೆದುಕೊಳ್ಳಲು ಹೆದರಿ ಹಿಂಜರಿಯುತ್ತಿದ್ದಳು. ಆಗ ಬಾಣಂತಿಯರಲ್ಲಿ ಸಾಮಾನ್ಯವಾಗಿ ಕಂಡುಬರುತ್ತಿದ್ದರು. ಎದೆಯಲ್ಲಿ ಹಾಲು ತುಂಬಿಕೊಂಡು ಯಮಬಾಧೆಯನ್ನು ಕೊಡುವುದು ಸಹಜವಾಗಿ ಬರುತ್ತಿತ್ತು. ಅದರ ಬಾಧೆಯನ್ನು ಸಹಿಸದ ಹೆಣ್ಣುಮಕ್ಕಳು ನೇಣಿಗೆ ಶರಣಾಗುತ್ತಿದ್ದರು. ಹೀಗಾಗಿ ಮಕ್ಕಳು ಅನಾಥರಾಗುತ್ತಿದ್ದು ಹೆಚ್ಚಾಗಿ ಕಂಡುಬರುತ್ತಿತ್ತು. ಇದಕ್ಕೆ ಕರೀಗೌಡರ "ಸಾರವಿಸ್ತಾರವೇ" ಕತೆ ಸಾಕ್ಷಿಯಾಗಿದೆ.

ಮೇಲಿನ ಅಂಶವನ್ನು ಗಮನಿಸಿದಾಗ ಏನೆಲ್ಲಾ ಆಚಾರ-ವಿಚಾರಗಳು ಇಂದಿಗೂ ನೆಡೆಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಕೆಲವು ಮಂದಿಯಂತೂ ಇನ್ನೂ ನಾಗರೀಕತೆ ಕಲಿಯದೇ ಆದಿಮಾನವರ ರೀತಿ ಜೀವನ ನಡೆಸುವುದನ್ನು ಕಾಣಬಹುದಾಗಿದೆ. ಜೊತೆಗೆ ಅಣ್ಣ-ತಮ್ಮರ ಬಾಂಧವ್ಯಕ್ಕೆ ಮಹತ್ವ ಸ್ಥಾನವಿದೆ ಎಂಬುವುದನ್ನು ಕೂಡ ಕಾಣಬಹುದಾಗಿದೆ. ತನ್ನ ಅಣ್ಣನಿಗೆ ಮೋಸಮಾಡಿ ತನ್ನ ಹೆಂಡತಿಯನ್ನು ಹುಡುಕಲು ಹೋಗಿ ಆಸ್ತಿಯನ್ನೆಲ್ಲಾ ಕಳೆದುಕೊಂಡು ಅಣ್ಣನ ಆಸ್ತಿಯನ್ನು ಕೂಡ ಭೋಗ್ಯಕ್ಕೆ ಮಾಡಿ ಕೊನೆಗೆ ತನ್ನ ದೇಹ ಹದಗೆಟ್ಟ ಸಂದರ್ಭದಲ್ಲಿ ದಿಕ್ಕುದೆಸೆಯಿಲ್ಲದೆ ದೇಶಾಂತರ ಹೆಣವಾಗುತ್ತೇನೆ ಎಂಬ ಭಾವನೆಯಿಂದ ತನ್ನ ಅಣ್ಣನ ಮನೆಯ ಜಗುಲಿಯ ಮೇಲೆ ಆಶಯ ಪಡೆದನು. ನನ್ನ ತಮ್ಮ ನನಗೆ ಮೋಸಮಾಡಿದ ಎಂದು ನೊಂದಿದ್ದರೂ ಕೂಡ ಅವನು ಕಾಯಿಲೆಯಿಂದ ನರಳುತ್ತಿರುವಾಗ ಅವನನ್ನು ಆಸ್ಪತ್ರೆ ಸೇರಿಸಲು ಅಣ್ಣ ಅತ್ತಿಗೆ ಮಾತನಾಡಿಕೊಳ್ಳುತ್ತಿರುವಾಗ ಆತನಿಗೆ ತನ್ನ ತಪ್ಪಿನ ಅರಿವಾಗಿ ಜಗುಲಿಯನ್ನು ಖಾಲಿಮಾಡಿರುವುದನ್ನು ಕಾಣಬಹುದು.

ಈ ಜಗತ್ತಿನಲ್ಲಿ ಮೋಸಕ್ಕೆ ಪ್ರತಿ ಮೋಸ ಎಂಬಂತೆ ಹಣಕಾಸಿಗಾಗಿ ಆಸ್ತಿ-ಪಾಸ್ತಿಗಾಗಿ ಕೊಲೆ ಸುಳಿಗೆ ನಡೆಯುತ್ತಿರುವ ಈ ಕಾಲದಲ್ಲಿ ತನ್ನ ತಮ್ಮ ಮೋಸಮಾಡಿದ್ದಾನೆ ಎಂದು ಗೊತ್ತಿದ್ದರೂ ಕರುಳ ಸಂಬಂಧವನ್ನು ಮರೆಯದ

ಹಳ್ಳಿಗರು ಸೋದರತ್ವಕ್ಕೆ ಬಹಳ ಬೆಲೆ ಕೊಡುವುದು ಕಂಡುಬರುತ್ತದೆ. ಬಾಂಧವ್ಯಕ್ಕೆ ನಿಜವಾಗಲೂ ಬೆಲೆಯಿರುವುದು ಕಂಡುಬರುವುದೇ ಹಳ್ಳಿಗಾಡಿನ ಮಣ್ಣಿನಲ್ಲಿ, ನಮ್ಮ ಮಣ್ಣಿನ ಮಹತ್ವವೇ ಅಷ್ಟು. ಅದರ ಸಾರವನ್ನು ಸ್ಪರ್ಶಿಸಿದ ಕರೀಗೌಡ ಬೀಚನಹಳ್ಳಿಯವರು ಬಾಂಧವ್ಯದ ಕೊಂಡಿಗಳನ್ನು ಪೋಣಿಸಿರುವುದನ್ನು ಕಾಣಬಹುದಾಗಿದೆ. ನಮ್ಮ ಹಳಳಿಗರ ಜೀವನ ಕಷ್ಟಸುಖದ ನಡುವೆ ಅರಳಿರುವ ಸೌಗಂಧ ಸ್ಪಷ್ಟದಂತೆ ಅವರು ಬದುಕು.

# ಉಪಸಂಹಾರ

ಡಾ. ಕರೀಗೌಡ ಬೀಚನಹಳ್ಳಿಯವರ ಪೂರ್ಣ ಕತೆಗಳನ್ನು ಓದಿದಾಗ ಅವರು ಹಳ್ಳಿಗಾಡಿನ ಜನರ ಬಗ್ಗೆ ಅಪಾರ ಪ್ರೀತಿ ವಿಶ್ವಾಸವಿಟ್ಟುಕೊಂಡಿರುವುದು ಕಂಡುಬರುತ್ತದೆ. ಹಳ್ಳಿಗಾಡಿನ ಜನರು ಪಡುವ ಕಷ್ಟಕ್ಕೆ ಇವರ ಮನಮಿಡಿಯುವುದನ್ನು ಕಾಣಬಹುದು. ಪ್ರಸ್ತುತ ಈ ಸಮಾಜದಲ್ಲಿ ಬೇರೆಯವರ ಕಷ್ಟಗಳಿಗೆ ಮರುಗುವ ಜನರೇ ವಿರಳವಾಗಿದ್ದಾರೆ. ಆದರೆ ಅಂತ ಜನರ ಮದ್ಯೆ ಕರೀಗೌಡ ಬೀಚನಹಳ್ಳಿಯವರು ಮೇರುಪರ್ವತದಂತೆ ಕಂಗೋಳಿಸಿದ್ದಾರೆ. ಒಟ್ಟು ಗ್ರಾಮೀಣ ಪ್ರದೇಶದ ಜನರ ಬದುಕಿನ ಸುಧಾರಣೆಯಾಗಬೇಕೆಂಬ ಬದಲಾವಣೆಯ ಆಶಯದ ಮಿಡಿತ ಇವರ ಕಥೆಗಳಲ್ಲಿ ಪ್ರಧಾನವಾಗಿ ಕಂಡುಬರುತ್ತವೆ.

ಕರೀಗೌಡ ಬೀಚನಹಳ್ಳಿಯವರ ಕತೆಗಳಲ್ಲಿರುವ ಸಾಮಾಜಿಕ ಪ್ರಜ್ಞೆ ಅವರ ಸಮಕಾಲೀನರನ್ನು ನಾಚಿಸುವಂತಿದೆ. ಇದನ್ನು ನೋಡಿದಾಗ ಅವರು ಸಮಾಜದಲ್ಲಿ ಇರುವ ಸೂಕ್ಷ್ಮ ಸಮಸ್ಯೆಗಳನ್ನು ಗಮನಿಸಿ ಅದನ್ನು ಸರಿಪಡಿಸುವ ಪರಿ ಅಚ್ಚರಿ ಮೂಡಿಸುವಂತಿದೆ. ಸಮಾಜದಲ್ಲಿನ ಜನರು ಕಂದಾಚಾರಗಳಿಗೆ ಸಿಲುಕಿ ನರಳು-ತ್ತಿರುವಾಗ ಅಲ್ಲಿನ ಜನರನ್ನು ಜಾಗೃತಗೊಳಿಸಲು ಪ್ರಯತ್ನಿಸುತ್ತಾರೆ. ಅದು ಬಾಲ್ಯ-ವಿವಾಹವಿರಬಹುದು, ಕೂಡಿಕೆ, ಮೂಡನಂಬಿಕೆ, ಸವತಿಯರಲ್ಲಿ ಕಂಡುಬರುವ ಜಗಳ ಮೈಮನಸ್ಸು ಕುಡಿತ, ಕಳ್ಳತನ ಮುಂತಾದವುಗಳ ಬಗ್ಗೆ ಅರಿವು ಮೂಡಿಸುವ ಪ್ರಯತ್ನದಲ್ಲಿಯೇ ಅವರು ಕತೆಗಳನ್ನು ರಚಿಸಿದ್ದಾರೆ ಎಂದರೆ ತಪ್ಪಾಗಲಾರದು. ಈ ರೀತಿ ಆಲೋಚನೆ ಮತ್ತೊಬ್ಬರಲ್ಲಿ ಬರಲು ಸಾಧ್ಯವಿಲ್ಲ.

ಪ್ರಸ್ತುತ ಪ್ರಪಂಚದಲ್ಲಿ ಸ್ವಾರ್ಥವೇ ಹೆಚ್ಚಾಗಿ ಕಂಡುಬರುತ್ತದೆ. ಊರ ದನ ಕಾಯ ದೊಡ್ಡ ಬೋರ ಎನಿಸಿಕೊಳ್ಳುವುದು ಎಕೆ ಬೇಕು ನಾನು ಮತ್ತು ನನ್ನ ಕುಟುಂಬ ವರ್ಗ ಚೆನ್ನಾಗಿ ಇದ್ದರೆ ಸಾಕು ಎಂದು ಯೋಚಿಸುವ ಜನರೆ ಹೆಚ್ಚು. ತಮ್ಮ ಸಂಬಂದಿಕರ ಬಗ್ಗೆಯೂ ಕೂಡ ಚಿಂತಿಸುವುದಿಲ್ಲ. ತಾನು ಒಳ್ಳೆಯ ಹೆಸರು, ಆಸ್ತಿ ಹಣ ಸಂಪಾದನೆ ಮಾಡಬೇಕು ಎನ್ನುವ ಜನರೆ ಹೆಚ್ಚು. ಆದರೆ ಬಾಲವಿಧವೆಯಾಗಿದ್ದ ಹುಡುಗಿಯನ್ನು ಕೂಡಿಕೆಯಂತಹ ಅನಿಷ್ಟ ಪದ್ಧತಿಯಿಂದ ತಪ್ಪಿಸುವ ಪ್ರಯತ್ನ ಇತರ ಕಥೆಗಳಲ್ಲಿ ಕಂಡುಬರುತ್ತದೆ.

ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುವ ಮತ್ತೊಂದು ವ್ಯವಸ್ಥೆಯೆಂದರೆ ಸವತಿಯರ ಜಗಳ. ಈ ಜಗಳಕ್ಕೆ ಮೂಲಕಾರಣ ಗಂಡಸು. ಈ ಯಜಮಾನ ಸಮಯಪ್ರಜ್ಞೆ ಹೊಂದಿದವನು ಆಗಿರಬೇಕು. ಎರಡು ಕುಟುಂಬಗಳನ್ನು ಸರಿದೂಗಿಸಿ-ಕೊಂಡು ಹೋಗಬೆಕು. ಮನೆಯ ಜಗಳವನ್ನು ಬೀದಿಗೆ ತರದೆ ತಮ್ಮ ಮರ್ಯಾದೆ,

ಗೌರವವನ್ನು ಕಾಪಾಡಿಕೊಂಡು ಹೋಗಬೇಕೆಂಬುದನ್ನು ತಿಳಿಸಿಕೊಡುವ ಪ್ರಯತ್ನ ಮಾಡಿದ್ದಾರೆ. ದೇಶದ ಬೆನ್ನೆಲುಬಾಗಿರುವ ಗ್ರಾಮಗಳ ಉದ್ದಾರ ಅಲ್ಲಿರುವ ಅನ್ಯಾಯ-ವನ್ನು ಸರಿಪಡಿಸುವ ಅದರಲ್ಲೂ ತಮ್ಮ ಲೇಖನಗಳ ಮೂಲಕ ತಿಳಿಯಪಡಿಸಲು ಪ್ರಯತ್ನಿಸಿದ್ದಾರೆ. ಆದರೆ ಡಾ.ಕರೀಗೌಡರ ಒಂದೊಂದು ಕತೆಗಳು ಅವರಲ್ಲಿರುವ ಸಾಮಾಜಿಕ ಕಳಕಳಿಯನ್ನು ತಿಳಿಸುತ್ತವೆ.

ತಮ್ಮ ತಾತ ಮುತ್ತಾತಂದಿರ ಕಾಲದಿಂದಲೂ ಜೀತ ಪದ್ಧತಿ ಹೆಚ್ಚಾಗಿ ಹಳ್ಳಿಗಳಲ್ಲಿ ಕಂಡುಬರುತ್ತದೆ. ಅಂದಿನ ಜೀತದಾಳು ಮುಗ್ಧ ಪಶುಗಳ ರೀತಿ ಕೆಲಸ ಮಾಡುತ್ತಿದ್ದರೂ. ಅಂತಹ ವ್ಯವಸ್ಥೆಯನ್ನು ಖಂಡಿಸುವಂತ ಎಚ್ಚರಿಕೆ ಮಾತುಗಳನ್ನು ಅವರ ಕತೆಗಳಿಂದಲೇ ತಿಳಿಸುವ ಪ್ರಯತ್ನ ಮಾಡಿದ್ದಾರೆ. ಈ ರೀತಿಯ ಪ್ರಯತ್ನ ಗೌಡರ ಮಕ್ಕಳಿಂದಲೇ ನಡೆದಿದೆ. ಹೊಲಗೇರಿಯ ಯುವಕರಲ್ಲಿ ಗೌಡರ ಹುಡುಗರು ಜಾಗೃತಿ ಮೂಡಿಸು-ವಂತಹ ಪ್ರಯತ್ನವನ್ನು ಮಾಡಿದ್ದಾರೆ. ಈಗಿನ ಸಮಾಜದಲ್ಲಿ ಒಬ್ಬನನ್ನು ತುಳಿದು ಮತ್ತೊಬ್ಬ ಬದುಕುವುದನ್ನು ಕಾಣುತ್ತೇವೆ. ಆದರೆ ಕರೀಗೌಡ ಬೀಚನಹಳ್ಳಿಯವರ ಮನದಲ್ಲಿ ಆ ರೀತಿಯ ಅನಿಷ್ಟ ಅಥವಾ ಕೆಟ್ಟ ಭಾವನೆಗಳು ಕಾಣುವುದಿಲ್ಲ.

ಇವರ ಮಹಾದಾಶೆ ನಮ್ಮ ಗ್ರಾಮದಲ್ಲಿ ಜಾತಿ ಬೇಧವಿರಬಾರದು. ಎಲ್ಲರೂ ಬಂಧುಗಳಂತಿರಬೇಕು. ಯಾವಾಗಲೂ ನಮ್ಮಲ್ಲಿ ಸೌಹಾರ್ಧತೆ ಎದ್ದು ಕಾಣಬೇಕು. ಎಲ್ಲರೂ ಮುಕ್ತ ಮನಸ್ಸಿನಿಂದ ತಮ್ಮ ಆಸೆ ಆಕಾಂಕ್ಷೆ, ಅಲೋಚನೆಗಳನ್ನು ಹಂಚಿಕೊಳ್ಳುವಂತೆ ಇರಬೇಕು. ನಮ್ಮ ಗ್ರಾಮಗಳಲ್ಲಿರುವ ಅನಿಷ್ಟ ಪದ್ಧತಿಗಳನ್ನು ಬುಡಸಮೇತ ಕಿತ್ತು ಹಾಕುವ ಪ್ರಯತ್ನ ಇವರ ಕತೆಗಳಲ್ಲಿ ನಡೆದಿದೆ.

ನಮ್ಮ ಗ್ರಾಮದಲ್ಲಿ ಜನರು ಸಮಾನ್ಯವಾಗಿ ಹೆದುರಿಸುತ್ತಿರುವ ಸಮಸ್ಯೆ ಎಂದರೆ "ವರದಕ್ಷಿಣೆ" ಈ ಅನಿಷ್ಟ ಪದ್ಧತಿಯಿಂದಲೇ ಅನೇಕ ಸಂಸಾರಗಳು ನಾಶವಾಗುತ್ತಿದೆ. ಬಡವರು ದಕ್ಷಿಣೆ ಕೊಟ್ಟು ಮದುವೆ ಮಾಡಲಾಗದೆ ಕಳ್ಳನಿಗೋ, ಕುಡುಕನಿಗೋ ಕೊಟ್ಟು ಮದುವೆ ಮಾಡಿಕೊಡುತ್ತಾರೆ. ನಮ್ಮ ಹೆಣ್ಣು ಮಕ್ಕಳು ತಂದೆತಾಯಿಯ ಮಾತೇ ವೇದವಾಕ್ಯವೆಂಬಂತೆ ಗಂಡ ಕಟ್ಟುವ ತಾಳಿಗೆ ತಲೆ ಬಾಗುತ್ತಾರೆ.

ಒಟ್ಟಾರೆಯಾಗಿ ಇವರ ಕತೆಗಳನ್ನು ಅದರಲ್ಲೂ ವರದಕ್ಷಿಣೆ ಸಂಬಂಧಪಟ್ಟ ಕತೆಗಳನ್ನು ಓದಿದಾಗ ಒಂದು ಹೆಣ್ಣು ಕೂಡ ವರದಕ್ಷಿಣೆ ಪದ್ಧತಿಯನ್ನು ವಿರೋಧಿಸಿ ನಿಂತಿದ್ದನ್ನು ಕಾಣಲಿಲ್ಲ. ಹಳ್ಳಿಯಲ್ಲಿರುವ ಪ್ರತಿಯೊಂದು ಹೆಣ್ಣು ಮಕ್ಕಳು ಇದರ ವಿರುದ್ಧ ಹೋರಾಡಬೇಕು ಆಗ ಮಾತ್ರ ತಮ್ಮ ಸಂಸಾರವನ್ನು ಕಾಪಾಡಿಕೊಳ್ಳಲು ಸಾಧ್ಯ. ಎಲ್ಲ ಸಮಾಜಿಕ ಸಮಸ್ಯೆಗಳನ್ನು ಸರಿಪಡಿಸುವ ಕರೀಗೌಡ ವರದಕ್ಷಿಣೆ ಪದ್ಧತಿ ವಿರೋಧಿಸಿ ನಿಲ್ಲುವಂತ ಹೆಣ್ಣು ಮಕ್ಕಳ ಚಿತ್ರಣವನ್ನು ತರುವಲ್ಲಿ ವಿಫಲವಾಗಿದ್ದಾರೆ ಎಂಬ ಭಾವನೆ ನನಗೆ. ಹೆಣ್ಣು ವಿದ್ಯಾವಂತೆಯಾದರೂ ಕೂಡ ತಂದೆತಾಯಿ ಹೇಳಿದ

ಮಾತೇ ನಿಜವೆಂದು ನಂಬುವುದು ಹೆಚ್ಚಾಗಿ ಕಂಡುಬರುತ್ತದೆ. ಕೂಡಿಕೆ ಪದ್ಧತಿ ವಿರೋಧಿಸಿ ಮರುವಿವಾಹ ಮಾಡಿಕೊಂಡಂತೆ ವರದಕ್ಷಿಣೆ ಪದ್ಧತಿಯನ್ನು ವಿರೋಧಿಸು-ವಂತೆ ಮದುವೆಯಾಗುವ ಯುವಕ ಯುವತಿಯರು ಜಾಗೃತಗೊಳ್ಳಬೇಕು.

ಡಾ ಕರೀಗೌಡರು ಹಳ್ಳಿಗಾಡಿನ ಜನರಲ್ಲಿ ಇರುವ ಕಂದಾಚಾರ ಹೋಗಲಾಡಿಸಲು ಪ್ರಯತ್ನಿಸಿದ್ದಾರೆ. ಈ ಕಂದಾಚಾರಗಳು ತೊಲಗಬೇಕೆಂದರೆ ಅವರಿಗೆ ಮೊದಲು ಶಿಕ್ಷಣ ಅಗತ್ಯವೆಂಬುದನ್ನು ಅರಿತರು. ಈ ರೀತಿಯ ಶೈಕ್ಷಣಿಕ ಪ್ರಜ್ಞೆ ಅವರಲ್ಲಿ ಕಂಡುಬಂದಿದೆ. ಮೊದಲು ಹಳ್ಳಿಯಲ್ಲಿ ಪ್ರತಿಯೊಂದು ಮಗುವೂ ಕೂಡ ಶಿಕ್ಷಣದಿಂದ ವಂಚಿತರಾಗಬಾರದು ಎಂಬುವುದು ಅವರ ಮಹದಾಸೆ. ಕರೀಗೌಡರು ಶೈಕ್ಷಣಿಕ ಕ್ಷೇತ್ರದಲ್ಲಿ ಮಾಡಿರುವ ಸಾಧನೆ ಅಪಾರವಾದುದು. ಅವರು ಎಲ್ಲ ಲೇಖಕರ ರೀತಿ ಒಳ್ಳೆಯ ಸಂಪಾದನೆ ಮಾಡಿ ತಮ್ಮ ಸಂಸಾರವನ್ನು ಶ್ರೀಮಂತಿಕೆಯ ಜೋಕಲಿಯ ಮೇಲೆ ತೂಗುತ್ತಾ ಕನಸುಕಾಣಬಹುದಿತ್ತು, ಆದರೆ ಅವರ ಆಸೆ ಮೊದಲು ನಾನು ಹುಟ್ಟಿ ಬೆಳೆದು ಕಲಿತ ಗ್ರಾಮದ ಉದ್ಧಾರವಾಗಬೇಕು. ನಮ್ಮ ಗ್ರಾಮ ಸಾಕ್ಷರತೆ ಸಾಧಿಸಬೇಕು ಎಂಬ ಹಂಬಲ. ಇವರ ಪ್ರತಿಯೊಂದು ಕತೆಯಲ್ಲೂ ಅವರು ಶಿಕ್ಷಣದ ಬಗ್ಗೆ ತಾಳಿರುವ ಒಲವು ಹೆಚ್ಚಾಗಿ ಕಂಡುಬರುತ್ತದೆ. ಈ ಒಂದು ಸಂದರ್ಭದಲ್ಲಿ ಕರೀಗೌಡರು ಪ್ರಗತಿವಾದಿಯಾಗಿ ಕಂಡುಬರುತ್ತಾರೆ. ಅವರ ಮನದಾಳದ ಆಸೆಯನ್ನು ಕತೆಯಲ್ಲಿ ಪಾತ್ರಗಳ ಮೂಲಕ ಚಿತ್ರಿಸಿದ್ದಾರೆ. ಕೇವಲ ಎಸ್.ಎಸ್.ಎಲ್.ಸಿ ಪಾಸಾದರೆ ತೃಪ್ತಿಯಿಲ್ಲ ಅವನು ಉನ್ನತ ಪದವಿ ಪಡೆಯಬೇಕೆಂಬ ಆಕಾಂಕ್ಷೆ. ಒಂದು ಪ್ರೈಮರಿ ಶಿಕ್ಷಕನಾದರೆ ಸಾಲದು ಅವನು ಡೆಪ್ಯುಟಿ ಕಮೀಷನರೋ, ಡಾಕ್ಟರ್, ಇಂಜಿನಿಯರಾಗಬೇಕೆಂಬುದೇ ಅವರ ಮನದ ತುಡಿತ ಅವರ ಕತೆಗಳಲ್ಲಿ ವ್ಯಕ್ತವಾಗಿದೆ.

ಶಿಕ್ಷಕನಾದವನು ಹೇಗೆ ಮಕ್ಕಳಿಗೆ ಮಾದರಿಯಾಗಿರಬೇಕು ಅವನ ಕರ್ತವ್ಯ ಏನು ಎಂಬುದನ್ನು ಕತೆಗಳಲ್ಲಿ ತಿಳಿಸಿದ್ದಾರೆ. ಸ್ವಂತ ಶಿಕ್ಷಕನೇ ಮಕ್ಕಳ ಮೇಲೆ ವೈಯಕ್ತಿಕ ಆಸಕ್ತಿ ತೆಗೆದುಕೊಂಡು ಅವರನ್ನು ಶಾಲೆಗೆ ದಾಖಲು ಮಾಡುವುದು ಊರ ಗೌಡನ ಜಗುಲಿ ಮೇಲೆ ಅರಳಿಕಟ್ಟೆಯ ಮೇಲೆ ಶಾಲೆಯನ್ನು ನಡೆಸುವದನ್ನು ಕಾಣಬಹುದು. ಸರ್ಕಾರ ಹಳ್ಳಿಗಳ ಪಾಠ ಶಾಲೆಯ ಬಗ್ಗೆ ಯಾವ ರೀತಿ ನಿರ್ಲಕ್ಷ್ಯ ತೋರುತಿದೆ ಎಂಬುವುದಕ್ಕೆ ಇವರ ಕತೆಗಳೇ ಸಾಕ್ಷಿಯಾಗಿವೆ. ವಿದ್ಯೆ ಕಲಿಯಲು ಯಾವ ಜಾತಿಯ ಅಡ್ಡ ಬರುವುದಿಲ್ಲ ಎಂಬುದಕ್ಕೆ ಅಜೀದ್ ಮೇಷ್ಟ್ರರು ಸಾಕ್ಷಿಯಾಗಿದ್ದಾರೆ.

ಇಲ್ಲಿ ಕರೀಗೌಡ ಅಜೀದ್ ಮೇಷ್ಟರು ಎಂಬ ಪಾತ್ರ ಮೂಲಕ ತಾವೇ ಬಡವರ ಮಕ್ಕಳ ವಿದ್ಯಾಭ್ಯಾಸಕ್ಕೆ ಸಹಾಯಹಸ್ತ ನೀಡಿದ್ದಾರೆ ಎನ್ನಬಹುದು. ನಮ್ಮ ಮಕ್ಕಳು ಹೆಚ್ಚು ಅಂಕ ಪಡೆದು ದೊಡ್ಡ ದೊಡ್ಡ ಹುದ್ದೆಗೆ ಸೇರಬೇಕು ಎಂದು ಬಯಸುವ ತಂದೆ ತಾಯಿಗಳೇ ಹೆಚ್ಚಾಗಿರುವ ಕಾಲದಲ್ಲಿ ನಮ್ಮ ಹಳ್ಳಿಯ ಮಕ್ಕಳು ಚೆನ್ನಾಗಿ ಓದಿ

ವಿದ್ಯಾವಂತರಾಗಿ ದೊಡ್ಡ ಹುದ್ದೆ ಅಲಂಕರಿಸಬೇಕು ಎಂಬುದು ಕರೀಗೌಡರ ಹೆಬ್ಬಯಕೆ. ಅನಾಥಂ ದೈವ ರಕ್ಷಕ ಎಂಬಂತೆ ಓದುವ ಮಕ್ಕಳಿಗೆ ಸಹಾಯ ಮಾಡುವವರು ನಮ್ಮ ಗ್ರಾಮಗಳಲ್ಲಿ ಇದ್ದಾರೆ ಎಂಬುದನ್ನು ತಿಳಿಸುವ ಪ್ರಯತ್ನ ಕರೀಗೌಡರದು ಆಗಿದೆ.

ಅಲ್ಲಿನ ಜನರ ಬಗ್ಗೆ ಅಲ್ಲಿನ ಸಮಸ್ಯೆಗಳ ಬಗ್ಗೆ ತಲೆ ಕೆಡಿಸಿಕೊಂಡಿದ್ದನ್ನೇ ಕಾಣಲಿಲ್ಲ. ಅವರು ಸಂಪೂರ್ಣವಾಗಿ ಹಳ್ಳಿಯನ್ನು ಮರೆತು ಪಟ್ಟಣಕ್ಕೆ ಮಾರಿಹೋಗಿ-ರುವುದು ಕಾಣುತ್ತೇವೆ. ಇಲ್ಲಿ ಕರೀಗೌಡರು ಪಟ್ಟಣ ವಾಸಿಯಾಗಿದ್ದರೂ ಕೂಡ ತಾನು ಹುಟ್ಟಿ ಬೆಳೆದ ಹಳ್ಳಿ, ಹಳ್ಳಿಯ ಜನರನ್ನು ಎಂದಿಗೂ ಮರೆತಿಲ್ಲಾ. ಅವರ ಮನ ಪ್ರತಿಯೊಂದು ಮಿಡಿತವು ಹಳ್ಳಿಯ ಬಗ್ಗೆ ಇವರ ಕಳಕಳಿಯನ್ನು ತಿಳಿಸುತ್ತದೆ. ಈ ದೃಷ್ಟಿಯಿಂದ ನನಗೆ ಅವರೊಬ್ಬ ವಿಶೇಷ ವ್ಯಕ್ತಿಯಾಗಿ ಕಾಣುತ್ತಿದ್ದಾರೆ.

ಕರೀಗೌಡರ ಪ್ರತಿಯೊಂದು ಕತೆಗಳ ಪುಟಪುಟದಲ್ಲೂ ಗ್ರಾಮ್ಯ ಸೊಗಡು ತುಂಬಿದೆ. ಆ ಒಂದೊಂದು ಪುಟವು ಗ್ರಾಮ್ಯ ಜನರು ಮನವನ್ನು ತೆರೆದಂತೆ ಅನುಭವವಾಗುತ್ತದೆ. ಹಳ್ಳಿ ಎಂದರೆ ನನಗೆ ತಕ್ಷಣ ನೆನಪಾಗುವುದು ಅಲ್ಲಿ ಬೆಸೆದು-ಕೊಂಡಿರುವ ಸಂಬಂಧಗಳು. ಗುರು ಹಿರಿಯರ ಬಗ್ಗೆ ತೋರುವ ಗೌರವ, ತಾಯಿಗೆ ತನ್ನ ಮಕ್ಕಳ ಬಗೆಗಿನ ಮಮಕಾರ ಒಬ್ಬರ ಕಷ್ಟಕ್ಕೆ ಸ್ಪಂದಿಸುವ ಮತ್ತೊಬ್ಬರು. ತಮ್ಮ ಕುಟುಂಬದ ಗೌರವವನ್ನು ಕಾಪಾಡುವ ಪ್ರಜ್ಞಾವಂತಿಕೆ. ಗ್ರಾಮ್ಯ ಜನತೆಗೆ ತಾಯಿಯ ಬಗೆಗೆ ಅಪಾರ ಪ್ರೀತಿ. ಈ ಎಲ್ಲಾ ಅಂಶಗಳನ್ನು ಕರೀಗೌಡ ಕತೆಗಳು ಒಳಗೊಂಡಿವೆ.

ಇವರ ಕತೆಗಳನ್ನು ನಾನು ಓದುವಾಗ ಪ್ರತಿಯೊಂದು ಘಟನೆಗಳು ನನ್ನ ಮನ ಮಿಡಿಯುವಂತೆ ಇತ್ತು. ಒಂದು ಕತೆಯು ನನ್ನ ಊರಿನ ಅಂದರೆ ನನ್ನ ಹಳ್ಳಿಯಲ್ಲಿ ಕಂಡುಬರುವ ಸಮಸ್ಯೆಗಳೇ ಎಂಬಂತೆ ನನಗೆ ಬಾಸವಾಗುತ್ತಿತ್ತು. ಈ ಕತೆ ಓದುವಾಗ ಆದ ಅನುಭವವನ್ನು ನನ್ನ ಮನೆಮಂದಿಯೊಂದಿಗೆ ಹಂಚಿಕೊಂಡಿದ್ದೇನೆ. ಇವರ ಕತೆಗಳಲ್ಲಿ ಕಂಡುಬರುವ ಪಾತ್ರಗಳ ಚಿತ್ರಣ ಇಡೀ ಕರ್ನಾಟಕ ರಾಜ್ಯದ ಹಳ್ಳಿಗಳಲ್ಲಿ ಕಂಡುಬರುವಂತಹ ಸಮಸ್ಯೆಗಳನ್ನು ಒಳಗೊಂಡಿದೆ. ಒಂದೊಂದು ಸನ್ನಿವೇಶವು ನಮ್ಮ ಮೈನವಿರೇಳಿಸುವಂತಿವೆ. ಇಂತಹ ಕತೆಗಳು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ದೊಡ್ಡ ಆಸ್ತಿಯಿದ್ದಂತೆ ಎಂದರೆ ತಪ್ಪಾಗಲಾರದು.

ನಮ್ಮ ಹಳ್ಳಿಗಾಡಿನ ಜನರು ಹೃದಯ ಶ್ರೀಮಂತಿಕೆ ಹೊಂದಿರುವವರು. ಹಣಕ್ಕಿಂತಲೂ ಬಾಂದವ್ಯವೇ ಮುಖ್ಯವೆಂದುಕೊಂಡಿರುವವರು. ಆದರೆ ಇಲ್ಲಿ ಬಡತನ ವೆಂಬ ಭೂತ ಯಾವಾಗಲೂ ಅವರ ಬೆನ್ನು ಏರಿ ಕುಳಿತಿದೆ. ಅದರ ಹಿಡಿತಕ್ಕೆ ಸಿಲುಕಿ ಜನರು ನರಳವುದನ್ನು ಕಾಣಬಹುದು. ಹಳ್ಳಿಗಾಡಿನ ಜನರು ಹೆಚ್ಚಾಗಿ ಭೂಮಿಯನ್ನು ಹೊಂದಿರವುದಿಲ್ಲ. ಇರುವ ಅಲ್ಪ ಸ್ವಲ್ಪ ಆಸ್ತಿ ಮಳೆ ನಂಬಿ ಬೇಸಾಯ. ಮಕ್ಕಳಿಗೆ ಓದು

ಬರಹ ಕಲಿಸದೇ ಹೆಣ್ಣು ಮಕ್ಕಳಿಗೆ ಅನುಕೂಲವಂತರನ್ನು ನೋಡಿ ಮದುವೆ ಮಾಡಲಾಗದೆ ಚಿಂತೆಯೆಂಬ ಸಂಸಾರದಲ್ಲಿ ತೇಲುತ್ತಿರುವವರ ಹಳ್ಳಿಗಾಡಿನ ಜನರು.

ಪ್ರಸ್ತುತ ಸಮಾಜದಲ್ಲಿ ಜಾಗತಿಕರಣದಿಂದಾಗಿ ನಗರ ಪ್ರದೇಶಗಳು ವಿಶಾಲವಾಗಿ ಬೆಳೆಯುತ್ತಿವೆ. ಐ.ಟಿ.ಬಿ.ಟಿ. ಕಂಪನಿಗಳೆಂದು ನಗರದಲ್ಲಿ ತಲೆಎತ್ತಿರುವುದು ಅಲ್ಪಸ್ವಲ್ಪ ಆಸ್ತಿಯನ್ನು ಇವು ವಶಪಡಿಸಿಕೊಳ್ಳುತ್ತಿರುವುದನ್ನು ಕಾಣಬಹುದು. ನಮ್ಮ ರೈತರು ತಮ್ಮ ಜಮೀನನ್ನು ಬಿಟ್ಟುಕೊಡದೆ ಹೊದರೆ ಸರ್ಕಾರ ಒತ್ತಡದಿಂದ ಜಮೀನನ್ನು ಬಿಡಿಸಿಕೊಳ್ಳುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ ನೈಸ್ ಕಂಪನಿಯರು ರಸ್ತೆ ಅಗಲೀಕರಣಕ್ಕಾಗಿ ವಹಿಸಿಕೊಂಡು ಜಮೀನಿನ ಬೇರೆ ಈಗ ನೈಸ್ ಕಂಪನಿ ರಸ್ತೆಗಾಗಿ ಬಳಸಿಕೊಳ್ಳುತಿರುವುದೇ ಬೇರೆಯಾಗಿದೆ. ಈ ರೀತಿಯಾಗಿ ರೈತರ ಜಮೀನನ್ನು ತಡೆಯುತ್ತಿದ್ದಾರೆ.

ನಗರ ಪ್ರದೇಶಗಳಲ್ಲೂ ಈಗ ಜನ ಜಂಗುಲಿಯಿಂದ ಕೂಡಿದೆ. ಶಾಂತಿ ವಾತಾವರಣವು ಹಾಳಾಗಿ ಅಶಾಂತಿ ತುಂಬಿಕೊಂಡಿದೆ. ಒಂದಲ್ಲ ಒಂದು ಕಾರಣ-ದಿಂದಾಗಿ ನಗರ ಪ್ರದೂಷಿತಗೊಳ್ಳುತ್ತಿದೆ. ಹಾಡು ಹಗಲೇ ಕೊಲೆ, ಅತ್ಯಾಚಾರಗಳು ಕಂಡುಬರುತ್ತವೆ. ಆ ನಗರದಲ್ಲಿ ಜನ ಜೀವನ ನಡೆಸುವುದೇ ಕಷ್ಟವಾಗಿ ಪರಿಣಮಿಸುತ್ತದೆ. ಇಲ್ಲಿನ ಜನರಲ್ಲಿ ನ್ಯಾಯ ನೀತಿ ಎಂಬುದಕ್ಕೆ ಬೆಲೆಯಿಲ್ಲದೆ ಎಲ್ಲರೂ ಕೂಡ ತಮ್ಮ ಬೇಳೆ ಬೇಯಿಸಿಕೊಳ್ಳಲು ಮಿರ್‌ಸಾಧಕರಂತೆ ನಡೆದುಕೊಳ್ಳುತ್ತಾರೆ.

ಪ್ರಸ್ತುತ ಈ ಸುಸಂದರ್ಭದಲ್ಲಿ ಕರೀಗೌಡ ಬೀಚನಹಳ್ಳಿಯವರ ಕತೆಗಳನ್ನು ಓದಿದಾಗ ಪ್ರತಿಯೊಂದರಲ್ಲಿ ಗ್ರಾಮೀಣ ಜೀವನ ದಟ್ಟವಾಗಿರುವುದನ್ನು ಕಾಣಬಹುದು. ಇಲ್ಲಿನ ಜೀವನಕ್ರಮಕ್ಕೆ ಮತ್ತು ಇಲ್ಲಿ ಬಾಂದವ್ಯಕ್ಕೆ ನಗರವಾಸಿಗಳು ನಾಚುವಂತೆ ಚಿತ್ರಿಸಿದ್ದಾರೆ.

ಆರಂಭದಲ್ಲಿ ನಮ್ಮ ಹಳ್ಳಿಯ ಮಂದಿ ಹೊಲಮನೆಯನ್ನು ಪಾಳು ಬಿಟ್ಟು ನಗರಕ್ಕೆ ಹೋಗಿ ಅಲ್ಲಿ ದೊಡ್ಡ ದೊಡ್ಡ ಬಂಗಲೆ ಕಟ್ಟಿ, ಕಾರಿನಲ್ಲಿ ಓಡಾಡಿಕೊಂಡು ಒಂದು ರೀತಿಯ ಯಾಂತ್ರಿಕ ಜೀವನವನ್ನು ನೆಡೆಸುತ್ತಿದ್ದಾರೆ. ಅಪ್ಪ ಅಮ್ಮ ಮಕ್ಕಳ ಸಂಬಂಧದಲ್ಲಿ ಬಹಳವಾದ ಅಂತರವಿರುತ್ತಿತ್ತು. ಮಕ್ಕಳು ಮಾಡುವ ಯಾವುದೇ ರೀತಿಯ ಕೃತ್ಯಗಳ ಬಗ್ಗೆ ಗಮನಹರಿಸುವ ಸಾವಧಾನ ಅಥವಾ ಸಮಯವಾಗಲಿ ನಗರದ ತಂದೆತಾಯಿಗೆ ಇರುವುದಿಲ್ಲ. ತಾವು ಮಾಡುವ ಕೆಲಸದ ಬಗ್ಗೆ ತಂದೆ ತಾಯಿಗೆ ತಿಳಿಸುವ ಪ್ರಯತ್ನವನ್ನು ಇವರು ಮಾಡುವುದಿಲ್ಲ. ಈ ಬಗೆಯ ಅಂತರ ದಿನದಿಂದ ದಿನಕ್ಕೆ ಬಹಳವಾಗುತ್ತಾ ಬರುತ್ತದೆ.

ಆದರೆ ಗ್ರಾಮಗಳ ಕುಟುಂಬದಲ್ಲಿ ಅಪಾರ ಬಾಂದವ್ಯ ಬೆಸೆದುಕೊಂಡಿರುವುದು ಹೆಚ್ಚಾಗಿ ಕಂಡುಬರುತ್ತದೆ. ಅದಕ್ಕೆ ಕರೀಗೌಡ ಬೀಚನಹಳ್ಳಿಯವರ ಕತೆಗಳೇ ಸಾಕ್ಷಿ. ಮಕ್ಕಳು ಮತ್ತು ಗಂಡಂದಿರ ಬೇಕು ಬೇಡಗಳನ್ನು ಬಹಳ ಹತ್ತಿರದಿಂದಲೂ ಅರಿಯಲು ಪ್ರಯತ್ನಿಸುತ್ತಾರೆ. ಮಕ್ಕಳು ಮಾಡುವ ಪ್ರತಿಯೊಂದು ಕೆಲಸ ಕಾರ್ಯಗಳನ್ನು ತಂದೆ ತಾಯಿ ಗಮನಕ್ಕೆತರುತ್ತಾರೆ ಮಕ್ಕಳು ತನ್ನ ತಂದೆ ತಾಯಿಯ ಕಷ್ಟಕ್ಕೆ ಸ್ಪಂದಿಸುವುದನ್ನು ಕಾಣಬಹುದು. ಹಳ್ಳಿಗರು ಮನೆ–ಮಠ, ಆಸ್ತಿ–ಪಾಸ್ತಿಯಲ್ಲಿ ಬಡವ–ರಾಗಿದ್ದರು ಪ್ರೀತಿ ಮಮಕಾರದಲ್ಲಿ ಶ್ರೀಮಂತಿಕೆಯನ್ನು ಹೊಂದಿರುತ್ತಾರೆ. ನಿಜವಾಗಲೂ ಸಂತೃಪ್ತ ಜೀವನ ಕಂಡುಬರುವುದು ಹಳ್ಳಿಗಳಲ್ಲಿ. ಇವರ ಕತೆಗಳ ಪ್ರಭಾವದಿಂದಲೆ ಅನೇಕ ಮಂದಿ ತಮ್ಮ ನಿವೃತ್ತಿ ಹೊಂದಿದ ಮೇಲೆ ಹಳ್ಳಿಯಲ್ಲಿ ಜಮೀನು ಖರೀದಿಸಿ ಹೊಲ, ತೋಟ ಮಾಡಿಕೊಂಡು ನೆಮ್ಮದಿ ಜೀವನ ಸಾಗಿಸುತ್ತಿರುವುದನ್ನು ಕಾಣಬಹುದು. ಇವರ ಕತೆಯಲ್ಲಿ ಬರುವ ರೈತಾಪಿಗಳು ಇರುವ ಒಂದು ಎಕರೆ ಹೊಲ, ಒಂದು ಅಂಕಣ ಮನೆಯ ಮೇಲೆ ತಮ್ಮ ಜೀವವನ್ನೇ ಇಟ್ಟುಕೊಂಡಿರುತ್ತಾರೆ. ಅದನ್ನು ಬೇರೆಯವರಿಗೆ ಮಾರಿದಾಗ ತಮ್ಮ ಮಕ್ಕಳನ್ನು ಕಳೆದುಕೊಂಡೆವೇನೋ ಎಂಬಂತೆ ಬಹಳವಾಗಿ ನೊಂದುಕೊಳ್ಳುತ್ತಾರೆ. ಇವರ ಕತೆಯಲ್ಲಿ ಕಂಡುಬರುವ ಅಪ್ಪಮಕ್ಕಳ ಸಂಬಂಧಕ್ಕೆ ಹೋಲಿಕೆ ಕೊಡಲು ಸಾಧ್ಯವಿಲ್ಲ. ಅಪ್ಪನ ಮಾತನ್ನು ನಡೆಸಲು ತಮ್ಮ ಪ್ರಾಣವನ್ನು ಕೊಡಲು ಸಿದ್ದರಿರುತ್ತಾರೆ. ಅವರ ಬಗ್ಗೆ ಅಪಾರ ಗೌರವವನ್ನು ಇಟ್ಟುಕೊಂಡಿದು ಈಗಲೂ ಕೂಡ ತಂದೆಯ ಎದುರು ನಿಂತು ಮಾತನಾಡದೆ ಎಷ್ಟೋ ಮಕ್ಕಳನ್ನು ಕಾಣಬಹುದು ಇಂತಹ ಆದರ್ಶ ತಂದೆ ತಾಯಿಯ ಮಕ್ಕಳನ್ನು ಇವರ ಕತೆಯಲ್ಲಿ ತಂದಿರುವುದು ಕತೆಗೆ ಜೀವಂತಿಕೆಯನ್ನು ತುಂಬಿಕೊಟ್ಟಿದೆ. ಇವರ ಕತೆಯಲ್ಲಿ ತನ್ನ ಮಕ್ಕಳಿಗಾಗಿಯೇ ತಮ್ಮ ಜೀವನ ಸಾಗಿಸುತ್ತಿರುವ ಹೆಂಗಳೆಯ ಚಿತ್ರಣ ಹೃದಯಸ್ಪರ್ಶಿಸುವಂತೆ ಚಿತ್ರಿಸಿದ್ದಾರೆ. ಇದು ನಿಜವಾಗಲೂ ಮೆಚ್ಚುವಂತಹದು.

ಪ್ರತಿಯೊಬ್ಬರು ಕತೆ, ಕಾದಂಬರಿ, ನಾಟಕ ಅನೇಕ ಸಾಹಿತ್ಯವನ್ನು ರಚಿಸ–ಬಹುದು. ಆದರೆ ಕರೀಗೌಡ ಬೀಚನಹಳ್ಳಿಯ ಆದರ್ಶ, ಮಾರ್ಗದರ್ಶನ ಸುಧಾರಣೆ, ಪ್ರಗತಿ ಸ್ವರೂಪಿಯಾದ ಕತೆಗಳನ್ನು ರಚಿಸಲು ಸಾಧ್ಯವಿಲ್ಲ. ಈ ಕತೆಗಳಲ್ಲಿ ತಮ್ಮ ಜೀವಂತಿಕೆಯನ್ನೇ ತುಂಬಿದ್ದಾರೆ ಎಂಬುವಷ್ಟು ಮಟ್ಟಿಗೆ ಓದುಗರನ್ನು ಆಕರ್ಷಿಸುತ್ತದೆ. ಇಂತಹ ನಿಸ್ವಾರ್ಥ ಮನುಷ್ಯ ನಮ್ಮ ಸಾಹಿತ್ಯ ಕ್ಷೇತ್ರಕ್ಕೆ ಹೊನ್ನ ಕಳಸವಿದ್ದಂತೆಯೇ ನಮ್ಮ ನಿಜವಾದ ಅಸ್ತಿತ್ವದ ಬೇರನ್ನು ಸದಾಕಾಲ ನೆನಪಿಸುತ್ತಾ. ವಿಚಲಿತರಾಗದೆ ಎಂದೂ ಅನ್ಯರಿಗೆ ಅಥವಾ ಅನ್ಯ ಸಂಸ್ಕೃತಿಗೆ ಮಾರು ಹೋಗದಂತೆ ಕತೆಯ ಪ್ರತಿ ಪುಟದಲ್ಲೂ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ.

ಈ ಕಾರಣದಿಂದಲೇ ಕರೀಗೌಡ ಬೀಚನಹಳ್ಳಿಯವರ ಕತೆಗಳನ್ನು ಅಧ್ಯನ ಮಾಡಬೇಕೆಂಬ ಹಂಬಲ ನನಗೆ ಹುಟ್ಟಿದ್ದು ಇವರು ಎಷ್ಟೇ ದೂರದಲ್ಲಿದ್ದರೂ ತಮ್ಮ ಜೊತೆಯಲ್ಲಿಯೇ ಸುಳಿದಾಡುತ್ತಿದ್ದಾರೆ, ನಮ್ಮೊಂದಿಗೆ ಒಡನಾಟವಿಟ್ಟುಕೊಂಡಿದ್ದಾರೆ ಎಂಬ ಭಾವನೆ ನಮ್ಮಲ್ಲಿ ಮೂಡುತ್ತದೆ. ಇತ್ತೀಚಿನ ಸಾಹಿತಿಗಳು ಅಸಾಧ್ಯವಾದುದನ್ನು ಸಾಧಿಸಿ ಹೆಸರು ಮಾಡಬೇಕು ಎಂದು ಬಯಸುವವರೆ ಹೆಚ್ಚು ಇಂತಹ ಕಾಲದಲ್ಲಿಯು ಎಲ್ಲರಿಗೂ ಚಿರಪರಿಚಿತವಿರುವ ಗ್ರಾಮ್ಯ ಬದುಕಿನಲ್ಲಿರುವ ಸಮಸ್ಯೆಗಳನ್ನು ಓದುಗರ ಮನಮುಟ್ಟುವಂತೆ ಚಿತ್ರಿಸಿ ಅದನ್ನು ಸರಿಪಡಿಸಲು ಪ್ರಯತ್ನಿಸುವುದರಿಂದ ನನಗೆ ಬಹಳ ಮೆಚ್ಚುಗೆಯಾಗಿದೆ. ಈಗಿನ ಮಕ್ಕಳಲ್ಲಿ ಹಳ್ಳಿಯೆಂದರೆ ತಿರಸ್ಕಾರ ಭಾವನೆ ಉಂಟುಹಾಕಿರುವ ಜನರ ನಡುವೆ ಜೀವನದ ನಿಜವಾದ ಸಾರವಿರುವುದು ಹಳ್ಳಿಗಳಲ್ಲಿ ಎಂಬುದು ತೋರಿಸಿಕೊಟ್ಟ ಅಕ್ಷಯ ತಾರೆಯೆ ಕರೀಗೌಡ ಬೀಚನಹಳ್ಳಿಯವರು.

# ಪರಾಮರ್ಶನ ಗ್ರಂಥಗಳು


೧. ಡಾ. ಕರೀಗೌಡ ಬೀಚನಹಳ್ಳಿ (ಸಂ.) – 'ಗ೯೯೮ ಸಣ್ಣಕಥೆ'
ಪ್ರಕಾಶನ ಟಿ.ಎಸ್.ದಕ್ಷಿಣಮೂರ್ತಿ
ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ
ಅಕಾಡೆಮಿ, ಬೆಂಗಳೂರು

೨. ಟಿ.ಪಿ.ಅಶೋಕ – 'ತೇಜಸ್ವಿ ಕಥನ'
ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ
ಕರ್ನಾಟಕ ೫೭೭೪೧೭

೩. ಬೊಳುವಾರು ಮಹಮದ್ ಕುಂಞ – 'ಶತಮಾನದ ಸಣ್ಣಕಥೆ'
ಪ್ರದಾನ ಸಂಪಾದಕರು
ಡಾ. ಗಿರಡ್ಡಿ ಗೋವಿಂದರಾಜು
ಅಧ್ಯಕ್ಷರು, ಕರ್ನಾಟಕ ಸಾಹಿತ್ಯ
ಅಕಾಡೆಮಿ,
ಬೆಂಗಳೂರು – ೫೬೦ ೦೦೨

೪. ಕುವೆಂಪು – 'ಮಲೆನಾಡಿನ ಚಿತ್ರಗಳು'
ಉದಯರವಿ ಪ್ರಕಾಶನ
ವಾಣಿವಿಲಾಸಪುರಂ
ಮೈಸೂರು – ೫೭೦ ೦೦೨

೫. ಪ್ರಸಾರಾಂಗ ಮತ್ತು ಕುವೆಂಪು – ಪ್ರಸಾರಾಂಗ ಮತ್ತು ಕುವೆಂಪು : 'ಸಣ್ಣ ಕಥೆಗಳು'
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೨೦೦೦

೬. ಹೇಮಾಪಟ್ಟಣಶೆಟ್ಟಿ – 'ಸಣ್ಣಕತೆ ೧೯೯೨'
ಪ್ರಕಾಶನ
ಬಿ.ಎಸ್.ಸತ್ಯನಾರಾಯಣರಾವ್
ರಿಜಿಸ್ಟ್ರಾರ್ ಕರ್ನಾಟಕ ಸಾಹಿತ್ಯ
ಅಕಾಡೆಮಿ

೭. ಅಬ್ದುಲ್ ರಶೀದ್ – 'ಸಣ್ಣ ಕಥೆ ೧೯೯೫'
ಪ್ರಕಾಶನ ಟಿ.ಎಸ್.ದಕ್ಷಿಣಾಮೂರ್ತಿ
ರಿಜಿಸ್ಟ್ರಾರ್ ಕರ್ನಾಟಕ ಸಾಹಿತ್ಯ
ಅಕಾಡೆಮಿ

| | | |
|---|---|---|
| ೮. ಶರತ್ ಕಲ್ಕೋಡ್ | – | ಸಣ್ಣಕತೆ ೧೯೯೩<br>ಪ್ರಕಾಶನ ಕಾ.ತ.ಚಿಕ್ಕಣ್ಣ<br>ರಿಜಿಸ್ಟ್ರಾರ್ ಕರ್ನಾಟಕ ಸಾಹಿತ್ಯ<br>ಅಕಾಡೆಮಿ |
| ೯. ಕೇಶವರೆಡ್ಡಿ ಹಂದ್ರಾಳ | – | 'ಸಣ್ಣಕತೆ ೧೯೯೧'<br>ಪ್ರಕಾಶನ<br>ಬಿ.ಎಸ್.ಸತ್ಯನಾರಾಯಣರಾವ್<br>ರಿಜಿಸ್ಟ್ರಾರ್ ಕರ್ನಾಟಕ ಸಾಹಿತ್ಯ<br>ಅಕಾಡೆಮಿ |
| ೧೦. ಕಿಶೋರ್ ಚರಣ್‌ದಾಸ್ | – | 'ದೇವರಮನೆ ಮತ್ತು ಇತರ ಕಥೆಗಳು'<br>ಅನುವಾದ: ಸೀತಾರಾಮಯ್ಯ<br>ಸೋಮನಾಥ |

*****

